# ಹತ್ತು ಮಕ್ಕಳ ತಾಯಿ

ಜಿ. ಪಿ. ರಾಜರತ್ನಂ



ಆನಂದ್ ಬ್ರದರ್ಸ್
ಬೆಂಗಳೂರು-೨.

# ಅರಿಕೆ

ಭಗವಂತನಾದ ಗೌತಮನೆಂಬ ಬುದ್ಧನ ಜೀವವು ತುಷಿತವೆಂಬ ಸ್ವರ್ಗದಿಂದ ಅವತರಿಸಿ, ಕಪಿಲವಸ್ತುವಿನ ಅರಸನಾದ ಶುದ್ಧೋದನನ ಪತ್ನಿಯಾದ ಮಾಯಾದೇವಿಯ ಗರ್ಭದಲ್ಲಿ ಸಿದ್ಧಾರ್ಥನೆಂಬ ರಾಜಕುಮಾರನಾಗಿ ಜನ್ಮತಾಳಿತು. ಆಷಾಢಮಾಸದಲ್ಲಿ ಗರ್ಭಕ್ಕೆ ಬಂದ ಆ ಮಗು, ವೈಶಾಖಮಾಸದಲ್ಲಿ, ಜಗತ್ತಿಗೆ ಬೆಳಕನ್ನು ಕಾಣಿಸುವುದಕ್ಕಾಗಿ, ಜಗತ್ತಿನ ಬೆಳಕನ್ನು ಕಂಡಿತು. ಮಗುವಿನ ಜನನವನ್ನು ಕೇಳಿ, ಆ ಅದ್ಭುತ ಬಾಲಕನನ್ನು ನೋಡಲು ಬಯಸಿ ಬಂದ ಅಸಿತನೆಂಬ ಋಷಿಯು, ಈ ಮಗುವೇ ಮುಂದೆ ಬುದ್ಧನಾಗಿ ಲೋಕಕ್ಕೆ ಬೆಳಕಾಗುವುದು ಎಂದು ಭವಿಷ್ಯ ಹೇಳಿದನು. ಮಗು ಹುಡುಗನಾಗಿ ಬೆಳೆದು, ಯೌವನವನ್ನು ಮೀರಿ, ಸವಿಯಬಹುದಾದ ಭೋಗಗಳನ್ನೆಲ್ಲ ಸವಿದು, ಆಯಿತು. ಸಿದ್ಧಾರ್ಥನು ತನ್ನ ಇಪ್ಪತ್ತೊಂಬತ್ತನೆಯ ವರ್ಷದಲ್ಲಿ, ಮತ್ತೆ ಆಷಾಢಮಾಸದಲ್ಲಿ, ಮತ್ತೊಂದು ಮರುಹುಟ್ಟಿಗೆ ಅವತರಿಸುವ ಹಾಗೆ, ತಂದೆ ಹೆಂಡತಿ ಮಗು ಮುಂತಾದ ಆಪ್ತಬಂಧುವರ್ಗವನ್ನೆಲ್ಲಾ ತೊರೆದು, ಬೆಳದಿಂಗಳ ರಾತ್ರಿಯಲ್ಲಿ ಕಪಿಲವಸ್ತುವಿನಿಂದ ಗೃಹತ್ಯಾಗಮಾಡಿ ಹೋದನು. ಅಲ್ಲಿಂದ ಆಚೆಗೆ ಆರು ವರುಷಗಳ ಕಾಲ ಅವ್ಯಾಹತವಾಗಿ, ಅಮೃತದ ಮಾರ್ಗವನ್ನು ಕುರಿತು ಅನ್ವೇಷಣಮಾಡಿದನು. ಆರು ವರುಷಗಳ ತುದಿಗೆ, ಮತ್ತೊಮ್ಮೆ ವೈಶಾಖಮಾಸದಲ್ಲಿ, ಇನ್ನೊಂದು ಜನ್ಮವನ್ನು ಧಾರಣೆಮಾಡುವ ಹಾಗೆ, ಸಂಬೋಧಿಯನ್ನು ಸಂಪಾದಿಸಿ, ಸಮ್ಯಕ್ ಸಂಬುದ್ಧನಾದನು. ಅಲ್ಲಿಂದ ಮುಂದೆ ನಲವತ್ತೈದು ವರ್ಷಗಳ ಕಾಲ, ತಾನು ಕಂಡ ಬೋಧಿಯನ್ನು ಕುರಿತು ಲೋಕಕ್ಕೆ ಹೇಳುತ್ತ, ಲೋಕವನ್ನು ನಡಸುತ್ತ ಇದ್ದು, ತನ್ನ ಎಂಬತ್ತನೆಯ ವಯಸ್ಸಿನಲ್ಲಿ ಪರಿನಿರ್ವಾಣಕ್ಕೆ ಸಂದನು.

ಭಗವಂತನು ಬೋಧಿವೃಕ್ಷದ ಕೆಳಗೆ ಕುಳಿತು, ಸದ್ಧರ್ಮಕ್ಕೆ ಶತ್ರುವಾದ ಮಾರನನ್ನು ಅವನ ಸೇನೆಯೊಡನೆ ಸೋಲಿಸಿಯಾದ ಮೇಲೆ, ಹಿಂದೆ ತನ್ನೊಡನೆ ಬೋಧಿಯನ್ನು ಅನ್ವೇಷಣೆ ಮಾಡುತ್ತಿದ್ದ ಪಂಚವರ್ಗೀಯ

ರೆಂಬವರಿಗೆ ತನ್ನ "ಧರ್ಮಚಕ್ರ ಪ್ರವರ್ತನ"ವೆಂಬ ಸೂತ್ರವನ್ನು ಉಪ ದೇಶಿಸಿದನು. ಅವರು ಭಗವಂತನಿಗೆ ಶರಣಾದರು, ಅವನ "ಸಂಘ" ಎನ್ನಿಸಿಕೊಂಡರು. ಇದಾದ ಮೂರನೆಯ ದಿವಸ, ವಾರಾಣಸಿಯ ಧನಿಕ ರಲ್ಲೊಬ್ಬನಾದ ಯಶನೆಂಬವನೂ ಅವನ ಜೊತೆಗಾರರೂ ಧರ್ಮಕ್ಕೆ ಶರಣಾಗಿ ಬಂದರು. ಅವರ ಬೆನ್ನ ಹಿಂದೆಯೇ ಬಂದವರೂ ಸೇರಿ, ಒಟ್ಟು ಅರುವತ್ತು ಜನ ಭಿಕ್ಷುಗಳು ಆದರು. ಆಗ ಭಗವಂತನು ಅವರಿಗೆ ಹೇಳಿ ದನು: "ನೀವು ಒಟ್ಟಿಗೆ ಒಂದು ಕಡೆ ನಿಲ್ಲಬೇಡಿ. ಜನಗಳಿಗೆ ಸುಖ ವಾಗಲೆಂದು, ಜನರಿಗೆ ಹಿತವಾಗಲೆಂದು, ಜನರಿಗೆ ಮೇಲಾಗಲೆಂದು, ಧರ್ಮವನ್ನು ಉಪದೇಶಮಾಡುತ್ತ ದೇಶವಲ್ಲೆಲ್ಲ ಸಂಚಾರಮಾಡಿರಿ."

ಆವೇಳೆಗೆ ಮಳೆಗಾಲ ಬಂತು. ಮಳೆಗಾಲದಲ್ಲಿ ಭಿಕ್ಷುಗಳು ಹೊರಗೆ ಸಂಚಾರಮಾಡತಕ್ಕದ್ದಲ್ಲ. ನಮ್ಮಲ್ಲಿ ಚಾತುರ್ಮಾಸವನ್ನು ಸಂನ್ಯಾಸಿ ಗಳು ಒಂದೆಡೆಯಲ್ಲಿ ಆಚರಿಸುವಂತೆ ಅವರಾದರೂ 'ವರ್ಷಾವಾಸ'ವನ್ನು ಆಚರಿಸುವರು. ಆ ಮೊದಲನೆಯ ವರ್ಷಾವಾಸವನ್ನು ವಾರಾಣಸಿಯಲ್ಲಿ ಆಚರಿಸಿದ ಮೇಲೆ. ಭಗವಂತನು ರಾಜಗೃಹಕ್ಕೆ ತೆರಳಿದನು. ಆರು ವರುಷದ ಹಿಂದೆ, ತಾನು ಅಮೃತವನ್ನು ಕಂಡೆನಾದರೆ ಅದನ್ನು ತಂದು ದೊರೆಗೆ ತಿಳಿಸುವೆನೆಂದು ವಾಗ್ದಾನಮಾಡಿದ್ದನು. ಅದರಂತೆ, ರಾಜ ಗೃಹಕ್ಕೆ ಬಂದು ಬಿಂಬಿಸಾರನಿಗೆ ಧರ್ಮವನ್ನು ಉಪದೇಶ ಮಾಡಿದಾಗ, ಬಿಂಬಿಸಾರನು ತನ್ನ ವೇಣುವನವೆಂಬ ರಮ್ಯವಾದ ಉದ್ಯಾನವನವನ್ನು ಬುದ್ಧನ ಹಾಗೂ ಅವನ ಸಂಘದ ಉಪಯೋಗಕ್ಕಾಗಿ ದಾನಮಾಡಿದನು.

ಭಗವಂತನು ನಲವತ್ತೈದು ವರ್ಷಗಳ ಕಾಲ ಪರಿವ್ರಾಜಕನಾಗಿ ತಿರುಗಾಡಿದನಷ್ಟೆ. ಆ ಕಾಲದಲ್ಲಿ ಆತನು ಊರ ಹೊರಗೆ, ವನಗಳ ನಡುವೆ, ನದೀತೀರಗಳಲ್ಲಿ ಮಾತ್ರ ತಂಗಿರುವನು. ಆದರಿಂದ ಅನೇಕರು ಭಗವಂತನಿಗಾಗಿಯೂ ಅವನ ಭಿಕ್ಷುಸಂಘಕ್ಕಾಗಿಯೂ ಅನೇಕ ವನ ಗಳನ್ನು ಮುಡಿಪಾಗಿರಿಸತೊಡಗಿದರು, ದಾನಮಾಡತೊಡಗಿದರು, ಆ ವನ ಗಳ ನಡುವೆ ವಿಹಾರಗಳನ್ನು—ಎಂದರೆ ವಾಸಸ್ಥಾನಗಳನ್ನು—ಕಟ್ಟಿಸಿ ಕೊಡತೊಡಗಿದರು. ಹೀಗೆ ಭಿಕ್ಷುಸಂಘಕ್ಕೆ ದಾನವಾಗಿ ಬಂದ ಉದ್ಯಾನ ಗಳಲ್ಲಿ ಮೊತ್ತಮೊದಲನೆಯದು ಬಿಂಬಿಸಾರನು ಕೊಟ್ಟ ಈ ವೇಣುವನ.

ಈ ವೇಣುವನದಂತೆಯೇ ಪ್ರಸಿದ್ಧವಾದದ್ದು ಎಂದರೆ—ಅಮ್ರಪಾಲಿ ಯೆಂಬ ವೈಶಾಲಿಯ ವೇಶ್ಯೆ ದಾನಮಾಡಿದ ಅಮ್ರಪಾಲಿವನ; ಕೌಶಾಂಬಿ ಯಲ್ಲಿ ಘೋಷಿತನೆಂಬ ಶ್ರೇಷ್ಠಿ ಕಟ್ಟಿಸಿಕೊಟ್ಟ ಘೋಷಿತಾರಾಮ; ರಾಜಗೃಹದಲ್ಲಿ ಜೀವಕನು ಕೊಟ್ಟ ಆಮ್ರವನ; ಶ್ರಾವಸ್ತಿಯಲ್ಲಿ ಅನಾಥ ಪಿಂಡಿಕನು ಜೀವಕನಿಂದ ಕೊಂಡುಕೊಂಡು, ಅದರೊಳಗೆ ತಾನು ವಿಹಾರ ವನ್ನು ಕಟ್ಟಿಸಿಕೊಟ್ಟ ಆ ಜೇತವನ; ಅದೇ ಶ್ರಾವಸ್ತಿಯಲ್ಲಿ ಮಿಗಾರಮಾತೆ ಯೆಂದು ವಿಖ್ಯಾತಿಯಾದ ವಿಶಾಖಾದೇವಿ ಕಟ್ಟಿಸಿಕೊಟ್ಟ ಪೂರ್ವಾರಾಮ; ನಾಲಂದದಲ್ಲಿ ಪಾವಾರಿಕನು ಕೊಟ್ಟ ಆಮ್ರವನ; ಇವೇ ಮೊದಲಾದುವು ಹಲವು. ಇವುಗಳೆಲ್ಲಲ್ಲ ಭಗವಂತನ ದೀರ್ಘಸಂಬಂಧದಿಂದ ಪ್ರಸಿದ್ಧ ವಾದುವೆಂದರೆ—ಎರಡು: ಶ್ರಾವಸ್ತಿಯ ಜೇತವನ ಮತ್ತು ಪೂರ್ವಾರಾಮ.

ಭಗವಂತನಿಗೂ ಧರ್ಮಕ್ಕೂ ಸಂಘಕ್ಕೂ ಶರಣರಾಗಿ ಬಂದ ಗೃಹಸ್ಥರನ್ನು ಬೌದ್ಧಸಂಪ್ರದಾಯವು ತನ್ನ ಧರ್ಮದ ಇತಿಹಾಸದಲ್ಲಿ ತುಂಬ ವಿಶ್ವಾಸದಿಂದ ಜ್ಞಾಪಿಸಿಕೊಳ್ಳುತ್ತದೆ. ಅವರ ಕತೆಯನ್ನೆಲ್ಲಾ ಬಣ್ಣಬಣ್ಣವಾಗಿ ವರ್ಣಿಸುತ್ತದೆ. ಓದುಗರಿಗೆ ಆ ಹಳೆಯ ಕಾಲದ ನೆನಪುಗಳಿಂದ ರೋಮಾಂಚನವನ್ನು ಉಂಟುಮಾಡುತ್ತದೆ.

ಇಂತಹ ವನ ವಿಹಾರಗಳನ್ನು ದಾನಮಾಡಿದ ಕೆಲವರ ಕತೆಗಳನ್ನು ಬೌದ್ಧ ಸಂಪ್ರದಾಯದ ಪುಸ್ತಕಗಳಿಂದ ಆಯ್ದು ಇಲ್ಲಿ ಕೊಟ್ಟಿದ್ದೇನೆ.

ಈ ಪುಸ್ತಕವನ್ನು ಪ್ರಕಟಿಸಬೇಕೆಂಬ ಸಂಕಲ್ಪ ಸುಮಾರು ಎಂಟು ವರ್ಷಗಳ ಹಿಂದಿನದು. ಸುಮಾರು ಎಂಟು ವರ್ಷಗಳ ಹಿಂದೆ, ಶಿವ ಮೊಗ್ಗೆಯ ವಾಸ್ತವ್ಯರಲ್ಲೊಬ್ಬರಾದ ಶ್ರೀ ಕಸೂಡಿ ವೆಂಕಟಶಾಸ್ತ್ರಿಗಳು ಶಿವಮೊಗ್ಗೆಯ ಕರ್ನಾಟಕ ಸಂಘಕ್ಕೆ ಒಂದು ಸ್ವತಂತ್ರವಾದ ಮಂದಿರ ವನ್ನು ನಿರ್ಮಾಣಮಾಡಿಸಿಕೊಟ್ಟರು. ಸುಮಾರು ೧೯೩೦ರಲ್ಲಿ ಸ್ಥಾಪನೆ ಯಾಗಿ, ಹತ್ತು ಹನ್ನೆರಡು ವರ್ಷಗಳ ಪರಮೋತ್ತಮವಾದ ಕನ್ನಡಸೇವೆ ಯಿಂದ ನಾಡಿನ ಪ್ರಮುಖ ಕರ್ನಾಟಕ ಸಂಘವೆಂಬ ಕೀರ್ತಿಯನ್ನು ಕಟ್ಟಿಕೊಂಡ ಸಂಘಕ್ಕೆ ಒಂದು ಸ್ವಂತ ಸ್ಥಳ ಇದ್ದರೆ, ಕಾರ್ಯ ಇನ್ನಷ್ಟು ಘನವಾಗಿ ನಡೆಯಬಹುದೆಂಬ ಕನಸಿನಿಂದ ಶ್ರೀ ಶಾಸ್ತ್ರಿಗಳು ಈ ಭವನ ವನ್ನು ದಾನಮಾಡಿದರು. ಇದರ ನಿರ್ಮಾಣವನ್ನು ಪ್ರವೇಶೋತ್ಸವ

ವನ್ನೂ ಪತ್ರಿಕೆಗಳಲ್ಲಿ ಓದಿದಾಗ ನನಗೆ ಹಾಗೇ, ಹಿಂದಿನ ಕಾಲದಲ್ಲಿ ಭಿಕ್ಷು ಸಂಘಕ್ಕೆ ವಿಹಾರವನ್ನು ದಾನಮಾಡಿದವರ ಕತೆಯೆಲ್ಲ ಜ್ಞಾಪಕಬಂತು. ಇದಾದ ಒಂದು ವರುಷದ ಒಳಕ, ಶ್ರೀ ಶಾಸ್ತ್ರಿಗಳನ್ನು ಕಂಡು ಗುರುತಾದಾಗ, ನಮ್ಮ ಬೌದ್ಧರಲ್ಲಿ ಆರಾಮ ವಿಹಾರಗಳನ್ನು ಸಂಘಕ್ಕೆ ದಾನ ಮಾಡಿದವರ ಒಂದು ಚರಿತ್ರೆಯ ಸಂಕಲನವನ್ನು ಅವರಿಗೆ ಅರ್ಪಿಸುವುದಕ್ಕೆ ಅಪ್ಪಣೆ ಕೇಳಿಕೊಂಡೆ. ಅವರೂ ವಿಶ್ವಾಸದಿಂದ ಒಪ್ಪಿಗೆ ಕೊಟ್ಟರು. ಕಾರಣಾಂತರಗಳಿಂದ ಇದುವರೆಗೂ ಆಗದೆ ನಡೆದದ್ದು, ಈಗ ಆಗಿದೆ.

ಮನಸ್ಸಿಗೆ ಶುಭಭಾವನೆಗಳನ್ನು ಸಂಯೋಜಿಸುವ ಈ ಬೌದ್ಧ ಕಥಾ ಸರಿತ್ಸಾಗರದ ಅಲೆಗಳ ಮೇಲಿನ ನಾಲ್ಕು ತುಂತುರನ್ನು ತಂದು ಇಲ್ಲಿ ಬೊಟ್ಟಿಕ್ಕಿದ್ದೇನೆ. ಅಭ್ಯಂಗನದ ದಿವಸ ನೆಲದ ಮೇಲೆ ತೊಟ್ಟು ಎಣ್ಣೆಯಿಟ್ಟು, 'ಅಶ್ವತ್ಥಾಮ ಬಲಿರ್ವ್ಯಾಸ' ಎಂದು ಹೇಳಿಕೊಂಡು ಅದನ್ನೆತ್ತಿ ನೆತ್ತಿಗೆ ಹಚ್ಚಿಕೊಳ್ಳುವ ಹಾಗೆ, ಧರ್ಮದ ಇತಿಹಾಸದಲ್ಲಿ ಚಿರಂಜೀವಿಗಳಾದ ವಿಶಾಖಾ, ಜೀವಕ, ಅನಾಥಪಿಂಡಿಕ ಪ್ರಭೃತಿಗಳ ಹೆಸರಿನಿಂದ ತಂದ ಈ ತುಂತುರು ಓದುಗರ ಮನಸ್ಸಿನ ನೆತ್ತಿಗೆ ತಂಪನ್ನು ತರುವುದೆಂದು ನನಗೆ ಭರವಸೆ.

ಈ "ಹತ್ತುಮಕ್ಕಳ ತಾಯಿ", ಹತ್ತು ಮಕ್ಕಳ ತಾಯಿಯಾದ ವಿಶಾಖೆಯ ಕತೆ, ಹಾಗೆಯೇ ಹತ್ತು ಮಕ್ಕಳ ತಾಯಿಯಾದ ಸಂಘಕ್ಕೆ ವನವಿಹಾರಗಳನ್ನು ದಾನಮಾಡಿದವರ ಕತೆ, ನಮ್ಮವರಿಗೆ ಪ್ರಿಯವಾಗಲಿ.

೧-೧-೫೨
ಮಲ್ಲೇಶ್ವರಂ.

— ಜಿ. ಪಿ. ರಾಜರತ್ನಂ.

# ವಿವರ

# ಸಣ್ಣ ಟಿಪ್ಪಣಿ

ಈ ಕಥೆಯಲ್ಲಿ ಬರುವ ಸಂಪ್ರದಾಯದ ಕೆಲವು ಪರಿಭಾಷೆಯ ಪರಿಚಯವನ್ನು ಮಾಡಿಕೊಂಡು, ಅನಂತರ ಕತೆಯನ್ನು ಓದಿದರೆ, ದಾರಿ ಸುಗಮವಾಗುತ್ತದೆ.

**ಅಕನಿಷ್ಠ ಭವನ**—ತುಂಬ ಮೇಲೆ ಇರುವ ಸ್ವರ್ಗ.

**ಅನುಭಾವ**—ಮಹಿಮೆ, ಸಾಮರ್ಥ್ಯ

**ಅವೀಚಿ**—ನಿರಂತರವಾಗಿ ಧಗಧಗಿಸುವ ನರಕ.

**ಅರ್ಹಂತ**—ಪುನರ್ಜನ್ಮವಿಲ್ಲದವನು, ಮುಕ್ತ

**ಆಮ್ರವನ**—ಮಾವಿನ ತೋಪು.

**ಆರಾಮ**—ಉಪವನ. ತೋಟ.

**ಆಸ್ರವ**—ಬುದ್ಧಿಗೆ ಭ್ರಮೆ ಹಿಡಿಸುವ ಮನಸ್ಸಿನ ಕೆಲವು ವಿಕಾರಗಳು.

**ಉಪಾಸಿಕೆ**—ಬುದ್ಧನ ಧರ್ಮದಂತೆ ನಡೆಯುವ ಗೃಹಿಣಿ.

**ಋದ್ಧಿವಂತ**—ಪವಾಡಗಳನ್ನು, ಅದ್ಭುತಗಳನ್ನು ನಡಸುವ ಸಾಮರ್ಥ್ಯವುಳ್ಳವನು.

**ಕುಂಭದಾಸಿ**—ನೀರು ಹೊತ್ತು ತರುವ ಸೇವಕಿ.

**ಕುಲಪತಿ**—ಶಿಷ್ಯರನ್ನು ಲಾಲಿಸಿ ಪಾಲಿಸುವ ಮುಖ್ಯ ಗುರು.

**ಗಂಧಕುಟಿ**—ವಿಹಾರದಲ್ಲಿ ಬುದ್ಧನಿಗಾಗಿ ನಿರ್ಮಿಸಿದ ಸುಗಂಧದ ಕೊಠಡಿ.

**ಘನಮೃಷ್ಟಕ**—ಚಿನ್ನದ ಗಟ್ಟಿಯಿಂದ ಮಾಡಿ, ಮೆರುಗುಕೊಟ್ಟ ಆಭರಣ.

**ಚಕ್ರವಾಳ**—ಭೂಮಿಯ ಸುತ್ತಲೂ ಮಂಡಲಾಕಾರವಾಗಿ ಹಬ್ಬಿರುವ ಪರ್ವತಗಳ ಸಾಲು.

ಚಾತುರ್ಮಹಾರಾಜಿಕ—ಆರು ದೇವಲೋಕಗಳಲ್ಲಿ ತೀರ ಕೆಳಗಿನವರೊಳಗಿರುವ ನಾಲ್ವರು ಮಹಾರಾಜರ ಪರಿವಾರ.

ತಥಾಗತ—ಸತ್ಯದ ದಾರಿಯಲ್ಲಿ ಬಂದವನು. ಬುದ್ಧನ ಹೆಸರುಗಳಲ್ಲೊಂದು.

ತುಶಿತ—ಒಂದು ಸ್ವರ್ಗ.

ದಶಬಲ - ಹತ್ತು ತೆರದ ಸಾಮರ್ಥ್ಯವುಳ್ಳ ಬುದ್ಧ.

ದಾನ – ಆಹಾರ, ವಿಹಾರ, ವಸ್ತ್ರ, ಔಷಧಗಳನ್ನು ಕೊಡುವುದು.

ದುರ್ಮೇಧ ಬುದ್ಧಿ ಕೆಟ್ಟವನು.

ಧರ್ಮಸೇನಾಪತಿ—ಬುದ್ಧನಿಗೆ 'ಧರ್ಮರಾಜ'ನೆಂದೂ, ಅವನ ಪ್ರಮುಖ ಶಿಷ್ಯನಾದ ಸಾರಿಪುತ್ರನಿಗೆ 'ಧರ್ಮಸೇನಾಪತಿ' ಎಂದೂ ಹೆಸರು ರೂಢಿ.

ನಗರಶೋಭನೆ —ಗಣಿಕೆ, ನಗರದ ಮುಖ್ಯ ವೇಶ್ಯೆ.

ನಾಗರಸ್ತ್ರೀ—ನಗರಶೋಭನೆ, ವೇಶ್ಯೆ.

ನಾಳಿ — ಒಂದು ಅಳತೆ.

ನಿದಾನ —ರೋಗದ ಕಾರಣ.

ನಿಷ್ಕ - ಚಿನ್ನದ ನಾಣ್ಯ.

ನೈಮಿತ್ತಿಕರು – ನಿಮಿತ್ತಗಳನ್ನು ನೋಡಿ ಭವಿಷ್ಯ ಹೇಳುವವರು.

ಪ್ರತ್ಯೇಕ ಬುದ್ಧ—ಬುದ್ಧನಂತೆಯೇ 'ಬೋಧಿ'ಯನ್ನು ಪಡೆದು, ತನ್ನ ಸ್ವಂತ ಮುಕ್ತಿಯನ್ನು ಮಾತ್ರ ಸಂಪಾದಿಸಿಕೊಂಡವನು; ಅದನ್ನು ಬುದ್ಧನಂತೆ ಜಗತ್ತಿಗೆ ಬೋಧಿಸದವನು.

ಪಾಥೇಯ—ಬುತ್ತಿ.

ಬೋಧಿ—ದಿವ್ಯಜ್ಞಾನ. ದುಃಖದ ಸ್ವರೂಪ, ದುಃಖದ ಕಾರಣ, ದುಃಖದ ನಿವಾರಣೆ ನಿರ್ಮೂಲಗಳನ್ನು ಕುರಿತ ತಿಳವಳಿಕೆ.

**ಭಗವನ್**—ಬುದ್ಧನಿಗೆ ಗೌರವ ಸೂಚಕವಾದ ಸಂಬೋಧನೆ.
**ಭಿಕ್ಷು**—ಬೌದ್ಧ ಸಂನ್ಯಾಸಿ.
**ಭೈಷಜ್ಯ**—ಔಷಧ.

**ಮಹಾನಾಗ**—ದೊಡ್ಡ ಆನೆ; ಬುದ್ಧನಿಗೆ ಒಂದು ಪರ್ಯಾಯನಾಮ. ಪ್ರಾಣಿಗಳಲ್ಲಿ ಆನೆ ಹೇಗೆ ದೊಡ್ಡದೋ, ಇತರ ಪ್ರಾಣಿಗಳ ಹಜ್ಜೆಯ ಗುರುತುಗಳೆಲ್ಲ ಅದರ ಹಜ್ಜೆ ಗುರುತಿನಲ್ಲಿ ಹೇಗೆ ಅಡಕವಾಗುವುದೋ ಹಾಗೆ, ಮನುಷ್ಯರಲ್ಲೆಲ್ಲ ಹಿರಿಯವನಾಗಿ, ಇತರ ಗುರುಗಳ ಬೋಧೆಯನ್ನು ತನ್ನದರಲ್ಲಿ ಒಳಗುಮಾಡಿಕೊಂಡವನು.
**ಮಹಾಲತಾ ಪ್ರಸಾಧನ**—ದೊಡ್ಡ ಬಳ್ಳಿಯ ಹಾಗಿರುವ ಆಭರಣ.
**ಮಿಗಾರ**—ಮೃಗಧರ ಎಂಬುದರ ತದ್ಭವ ಚಂದ್ರ ಎಂದು ಅರ್ಥ.
**ಮಿಥ್ಯಾದೃಷ್ಟಿ**—ಇಹವನ್ನೂ ಪರವನ್ನೂ ಕುರಿತು ತಪ್ಪು ಭಾವನೆಗಳುಳ್ಳವನು.

**ರಕ್ತಕಷಾವರ್ಣ**—ಕೆಂಪು ಬಣ್ಣದ ಚಿನ್ನ.
**ರತ್ನತ್ರಯ**—ಬುದ್ಧ, ಧರ್ಮ, ಸಂಘ; ತಿಳಿದ ಗುರು, ಆತನು ತಿಳಿಸಿದ ಬೋಧೆ, ಅದನ್ನು ಅನುಸರಿಸುವ ಜನ-ಎಂಬ ಮೂರು ಮುಖ್ಯ ವಸ್ತುಗಳು.

**ವರ್ಣದಾಸಿ**—ರೂಪದಾಸಿ. ಗಣಿಕೆ. ವೇಶ್ಯೆ.
**ವರ್ಷಾವಾಸ**—ಮಳೆಗಾಲದಲ್ಲಿ ಒಂದು ಕಡೆ ವಾಸಿಸುವುದು.
**ವಿರೇಚಕ**—ಭೇದಿಯ ಔಷಧ.
**ವಿಹಾರ**—ವಾಸಮಾಡುವ ಕುಟೀರ. ಆರಾಮದೊಳಗಿನ ಕಟ್ಟಡ.
**ವೇಣುವನ**—ಬಿದಿರು ಮೆಳೆಗಳ ತೋಪು.

**ಶ್ರಮಣ**—ಬೌದ್ಧ ಸಂನ್ಯಾಸಿ.
**ಶಾಸನ**—ಬುದ್ಧನು ಹೇಳಿದ ಧರ್ಮ.
**ಶ್ರಾವಿಕೆ**—ಬುದ್ಧನ ಮಾತಿನಂತೆ ನಡೆಯುವ ಗೃಹಿಣಿ.

**ಶಿಲ್ಪ**—ವಿದ್ಯೆ.

**ಶೀಲ**—ಹಿಂಸೆಮಾಡದಿರುವುದು, ಕದಿಯದಿರುವುದು, ಬ್ರಹ್ಮಚರ್ಯ ಪಾಲಿಸುವುದು, ಸುಳ್ಳಾಡದಿರುವುದು, ಚಾಡಿಯಾಡದಿರುವುದು, ಕುಡಿಯದಿರುವುದು ಮುಂತಾದ ನಡತೆಗಳು.

**ಶುಲ್ಕ**—ಕಲಿತ ಪಾಠಕ್ಕೆ ಕೊಡಬೇಕಾದ ದ್ರವ್ಯ.

**ಶ್ರೇಷ್ಠಿ**—ವರ್ತಕ ಕುಲದವನು, ಸೆಟ್ಟಿ.

**ಸ್ಥವಿರ**—ವಯಸ್ಸಾಗಿ, ಸಂಘದಲ್ಲಿ ಅನುಭವ ಹೊಂದಿದ, ಬೌದ್ಧ ಭಿಕ್ಷು.

**ಸಂಘ**—ಬೌದ್ಧ ಸಂನ್ಯಾಸಿಗಳ ಸಮುದಾಯ.

**ಸಂಘಾರಾಮ**—ಸಂಘದ ವಾಸಸ್ಥಾನ.

**ಸ್ನಾನಚೂರ್ಣ**—ಸ್ನಾನಮಾಡುವಾಗ ದೇಹಸಂಸ್ಕಾರಕ್ಕೆ ಉಪಯೋಗಿಸುವ ಪರಿಮಳದ ಪುಡಿ. ಈಗಿನ Toilet Powders ಮಾದರಿ.

**ಸ್ರೋತಾಪತ್ತಿ**—ಸ್ರೋತ ಎಂದರೆ ಹೊಳೆ, ಸಂಸಾರವೆಂಬ ಹೊಳೆ. ಆಪತ್ತಿ ಎಂದರೆ ಅದರ ಹತ್ತಿರ ಹೋಗುವುದು. ಸಂಸಾರದ ಹೊಳೆಯನ್ನು ದಾಟುವುದಕ್ಕೋಸ್ಕರ ಅದರ ಹತ್ತಿರ ಹೋಗುವುದು. ಅದಕ್ಕೋಸ್ಕರವಾಗಿ ಬುದ್ಧ, ಧರ್ಮ, ಸಂಘ ಎಂಬ ರತ್ನತ್ರಯವನ್ನು ಆಶ್ರಯಿಸುವುದು, ಅಹಿಂಸೆಯೇ ಮೊದಲಾದ ಶೀಲಗಳನ್ನು ಕೈಕೊಳ್ಳುವುದು.

**ಸ್ರೋತಾಪನ್ನ**—ಬುದ್ಧನನ್ನೂ ಧರ್ಮವನ್ನೂ ಸಂಘವನ್ನೂ ಶರಣು ಹೊಕ್ಕವನು; ಅಹಿಂಸೆಯೇ ಮೊದಲಾದ ಶೀಲಗಳನ್ನು ಕೈಕೊಂಡವನು.

ಶಿವಮೊಗ್ಗೆಯ ಕರ್ನಾಟಕ ಸಂಘ

ಇನ್ನೂ ಚೆನ್ನಾಗಿ ಹೆಚ್ಚು ಕೆಲಸಮಾಡಲೆಂದು

೧೯೪೨-೧೯೪೩

ಆ ದೇಶಕ್ಷೋಭೆಯ ದಿನಗಳಲ್ಲಿ

ಸಂಘಕ್ಕೆ ಸ್ವಂತ ಮಂದಿರವನ್ನು ಕಟ್ಟಿಸಿಕೊಟ್ಟ

ಶಿವಮೊಗ್ಗೆಯ ಸನ್ಮಾನ್ಯ

## ಶ್ರೀ ಹಸೂಡಿ ವೆಂಕಟಶಾಸ್ತ್ರಿಗಳು

ಇವರಿಗೆ

ಈ ವನ ವಿಹಾರ ದಾನಮಾಡಿದವರ ಪುಣ್ಯಕಥೆ ಅರ್ಪಿತವು

# ವಿ ಶಾ ಖಾ

— ೧ —

ಅಂಗರಾಷ್ಟ್ರದಲ್ಲಿ ಭದ್ರಿಕನಗರ. ಅಲ್ಲಿ ವಿಶಾಖಾ ಜನ್ಮತಾಳಿದಳು. ಆಕೆಯ ತಂದೆ: ಮೆಂಡಕಶ್ರೇಷ್ಠಿಯ ಮಗನಾದ ಧನಂಜಯಶ್ರೇಷ್ಠಿ. ಆಕೆಯ ತಾಯಿ: ಧನಂಜಯಶ್ರೇಷ್ಠಿಯ ಅಗ್ರಮಹಿಷಿಯಾದ ಸುಮನಾ ದೇವಿ.

ವಿಶಾಖೆಗೆ ಏಳುವರ್ಷಮಾತ್ರವಾಗಿದ್ದಾಗ, ಭಗವಂತನಾದ ಬುದ್ಧನು ಭದ್ರಿಕನಗರಕ್ಕೆ ಬಂದನು. ಆ ನಗರದ ಶೈಲನೆಂಬ ಬ್ರಾಹ್ಮಣನೂ ಆತನ ಬಂಧುಬಾಂಧವರೂ ಧರ್ಮದಲ್ಲಿ ಮನಃಪ್ರಸಾದವನ್ನು ಪಡೆದಿರುವರು ಎಂಬುದನ್ನು ತಿಳಿದು, ಅವರಿಗೆ ಬೋಧೆಮಾಡುವುದಕ್ಕಾಗಿ, ಭಗವಂತನು ತನ್ನ ಮಹಾಭಿಕ್ಷುಸಂಘದ ಸಂಗಡ ಆ ಭದ್ರಿಕನಗರಕ್ಕೆ ಬಂದನು.

ಆ ಕಾಲದಲ್ಲಿ ಆ ನಗರದ ಶ್ರೇಷ್ಠಿಸ್ಥಾನವನ್ನು ಮೆಂಡಕಶ್ರೇಷ್ಠಿ ತಾನು ನಿರ್ವಹಿಸುತ್ತಿದ್ದನು.

ಈತನಂತೆಯೇ ಮಹಾಪುಣ್ಯವಂತರಾದವರು ಇನ್ನೂ ನಾಲ್ಕು ಜನ ಆ ಕಾಲದಲ್ಲಿ ಆ ನಗರದಲ್ಲಿ ಇದ್ದರು. ಅವರು ಯಾರುಯಾರೆಂದರೆ: ಮೆಂಡಕಶ್ರೇಷ್ಠಿಯ ಹಿರಿಯ ಹೆಂಡತಿಯಾದ ಚಂದ್ರಪದ್ಮಾ, ಆತನ ಹಿರಿಯ ಮಗನಾದ ಧನಂಜಯ, ಧನಂಜಯನ ಪತ್ನಿ ಸುಮನಾದೇವಿ, ಮತ್ತು ಮೆಂಡಕಶ್ರೇಷ್ಠಿಯ ದಾಸನಾದ ಪೂರ್ಣ.

ಮೆಂಡಕಶ್ರೇಷ್ಠಿಗೆ ಅಮಿತವಾದ ಭೋಗಸಂಪತ್ತಿಯಿತ್ತು. ಬಿಂಬಿಸಾರ ರಾಜನ ಆಳಿಕೆಗೆ ಒಳಪಟ್ಟಿದ್ದ ಆ ಭದ್ರಿಕನಗರದಲ್ಲಿ, ಮೆಂಡಕಶ್ರೇಷ್ಠಿಯಂತೆಯೇ ಅಮಿತವಾದ ಭೋಗಸಂಪತ್ತಿಯನ್ನು ಪಡೆದಿದ್ದವರು ಇನ್ನು ನಾಲ್ವರಿದ್ದರು. ಅವರು ಯಾರುಯಾರೆಂದರೆ: ಜ್ಯೋತಿಕ, ಜಟಿಲ, ಪೂರ್ಣಕ, ಕಾಕವಲಿಕ ಎಂಬವರು. ಮೆಂಡಕಶ್ರೇಷ್ಠಿಯೂ ಸೇರಿ, ಅವರು ಐದುಜನ—ಆ ನಗರದಲ್ಲಿ ಅಮಿತವಾದ ಭೋಗಸಂಪತ್ತಿಯುಳ್ಳವರು.

ದಶಬಲನಾದ ಭಗವಂತನು ತನ್ನ ನಗರಕ್ಕೆ ಬರುವನೆಂಬುದನ್ನು ಮೆಂಡಕಶ್ರೇಷ್ಠಿ ಕೇಳಿ, ಧನಂಜಯಶ್ರೇಷ್ಠಿಯ ಮಗಳಾದ ವಿಶಾಖಾ ಕನ್ಯೆಯನ್ನು ಕರೆಕಳುಹಿ, ಹೇಳಿದನು : "ಅಮ್ಮ, ಇಂದು ನಿನಗೂ ಮಂಗಲದ ದಿವಸ, ನನಗೂ ಮಂಗಲದ ದಿವಸ. ನಿನ್ನ ಪರಿವಾರದ ಐನೂರು ದಾಸಿಯರ ಸಹಿತವಾಗಿ ಹೋಗಿ, ದಶಬಲನನ್ನು ಎದುರುಗೊಂಡು ಸತ್ಕರಿಸಿ ಬಾ."

ಅದಕ್ಕೆ ಆಕೆ "ಒಳ್ಳೆಯದು" ಎಂದು ಉತ್ತರಕೊಟ್ಟು, ಒಪ್ಪಿ, ಹಾಗೇ ಮಾಡಿದಳು. ಮಾಡಬೇಕಾದುದನ್ನೂ ಮಾಡಬಾರದ್ದನ್ನೂ ಬಲ್ಲವಳು ಆಕೆ. ಎಲ್ಲಿಯವರೆಗೆ ರಥದಲ್ಲಿ ಹೋಗತಕ್ಕದ್ದೋ ಅಲ್ಲಿಯವರೆಗೆ ರಥದಲ್ಲಿ ಹೋಗಿ, ಅನಂತರ ರಥದಿಂದ ಇಳಿದು, ಪಾದಚಾರಿಯಾಗಿ ಗುರುವಿನ ಬಳಿಗೆ ಸಾರಿ, ವಂದನೆಮಾಡಿ, ಒಂದುಕಡೆ ನಿಂತಳು. ಗುರು ಆಕೆಯ ಚರ್ಯೆಗೆ ವಶನಾಗಿ, ಆಕೆಗೆ ಧರ್ಮವನ್ನು ಉಪದೇಶಮಾಡಿದನು. ಉಪದೇಶದ ಅಂತ್ಯದಲ್ಲಿ ವಿಶಾಖೆಯೂ ಆಕೆಯ ಪರಿವಾರದ ಐನೂರು ಕನ್ಯಕೆಯರೂ ಸ್ರೋತಾಪತ್ತಿಫಲದಲ್ಲಿ ಪ್ರತಿಷ್ಠಿತರಾದರು.

ಮೆಂಡಕಶ್ರೇಷ್ಠಿ ತಾನೂ ಗುರುವಿನ ಬಳಿಗೆ ಸಾರಿ, ಧರ್ಮಕಥೆಯನ್ನು ಕೇಳಿ, ಸ್ರೋತಾಪತ್ತಿಫಲದಲ್ಲಿ ಪ್ರತಿಷ್ಠಿತನಾದನು. ಮಾರನೆಯ ದಿವಸ ತನ್ನ ಮನೆಯಲ್ಲಿ ಭಿಕ್ಷೆಗೆ ಬರಬೇಕೆಂದು ಗುರುವನ್ನು ಆಮಂತ್ರಿಸಿದನು. ಮನೆಯಲ್ಲಿ ರುಚಿಯಾದ ಖಾದ್ಯಗಳನ್ನೂ ಭೋಜ್ಯಗಳನ್ನೂ ಮಾಡಿಸಿ, ಬುದ್ಧನೇ ಮೊದಲಾದ ಭಿಕ್ಷುಸಂಘವನ್ನು ಪರಿಪರಿಯಾಗಿ ಸೇವಿಸಿದನು. ಈ ರೀತಿಯಾಗಿ ಅರ್ಧಮಾಸದ ಕಾಲ ಮಹಾದಾನವನ್ನು ನಡಸಿದನು. ಗುರುವಾದರೋ, ಇಷ್ಟಬಂದಷ್ಟು ಕಾಲ ಭದ್ರಿಕನಗರದಲ್ಲಿ ಇದ್ದು, ಅನಂತರ ಅಲ್ಲಿಂದ ತೆರಳಿದನು.

— ೨ —

ಆ ಕಾಲದಲ್ಲಿ, ಮಗಧದ ದೊರೆಯಾದ ಬಿಂಬಿಸಾರನೂ ಕೋಸಲದ ರಾಜನಾದ ಪ್ರಸೇನಜಿತನೂ ಒಬ್ಬರ ತಂಗಿಯನ್ನು ಒಬ್ಬರು ಮದುವೆಯಾಗಿ, ಬಂಧುತ್ವ ಬೆಳೆಸಿದ್ದರು.

ಆಗ ಒಂದು ದಿವಸ ಕೋಸಲರಾಜನು ಚಿಂತಿಸಿದನು : "ಬಿಂಬಿಸಾರನ ರಾಜ್ಯದಲ್ಲಿ ಅಮಿತವಾದ ಭೋಗಸಂಪತ್ತಿಯುಳ್ಳವರು ಐದು ಜನ ಇದ್ದಾರೆ. ನನ್ನ ರಾಜ್ಯದಲ್ಲಿ ಅಂತಹವರು ಒಬ್ಬರೂ ಇಲ್ಲ. ಒಂದು ವೇಳೆ, ನಾನು ಬಿಂಬಿಸಾರನ ಬಳಿಗೆ ಹೋಗಿ, ಆ ಮಹಾ ಪುಣ್ಯವಂತರಲ್ಲಿ ಒಬ್ಬನನ್ನು ಕಳುಹಿಸಿಕೊಡು ಎಂದು ಬೇಡಿಕೊಂಡರೋ!"

ಹಾಗೆಂದುಕೊಂಡು ಅವನು ಹೋಗಿ, ಬಿಂಬಿಸಾರನೊಡನೆ ಕುಶಲ ಪ್ರಶ್ನೆಗಳು ಆದಮೇಲೆ, "ಏನು ಕಾರಣವಾಗಿ ಬಂದೆ, ಕೋಸಲರಾಜ?" ಎಂದು ಪ್ರಶ್ನಿಸಿದರೆ, ಕೋಸಲರಾಜನು ಹೇಳಿದನು : "ನಿನ್ನ ರಾಜ್ಯದಲ್ಲಿ ಮಹಾಪುಣ್ಯವಂತರೂ ಅಮಿತವಾದ ಭೋಗ ಸಂಪತ್ತಿಯುಳ್ಳವರೂ ಐದು ಜನ ಇದ್ದಾರೆ. ಅವರಲ್ಲಿ ಒಬ್ಬರನ್ನು ನನ್ನ ರಾಜ್ಯಕ್ಕೆ ಕರೆದುಕೊಂಡು ಹೋಗೋಣ, ಎಂದು ಬಂದಿದ್ದೇನೆ. ಅವರಲ್ಲಿ ನನಗೆ ಒಬ್ಬನನ್ನು ಕೊಡು."

"ಅವರು ಮಹಾಕುಲದವರು. ಅವರನ್ನು ಕದಲಿಸಲು ನನ್ನ ಕೈಲಾಗದು."

"ನಾನು ಕೇಳಿದ್ದನ್ನು ಪಡೆಯದೆ ಇಲ್ಲಿಂದ ಹೋಗುವುದಿಲ್ಲ."

ಬಿಂಬಿಸಾರ ರಾಜನು ಅಮಾತ್ಯರೊಡನೆ ಮಂತ್ರಾಲೋಚನೆ ಮಾಡಿದನು. "ಜ್ಯೋತಿಕ ಮೊದಲಾದ ಮಹಾಕುಲದವರನ್ನು ಕದಲಿಸುವುದೆಂದರೆ ಪೃಥ್ವಿಯನ್ನು ಕದಲಿಸಿದ ಹಾಗೆ. ಆದರೆ. ಮೆಂಡಕಶ್ರೇಷ್ಠಿಯ ಮಗನಾದ ಧನಂಜಯಶ್ರೇಷ್ಠಿ ಇದ್ದಾನೆ. ಆತನೊಡನೆ ಆಲೋಚಿಸಿ, ನಿನಗೆ ಉತ್ತರ ಹೇಳುತ್ತೇನೆ." ಎಂದು ಹೇಳಿದನು.

ಧನಂಜಯ ಶ್ರೇಷ್ಠಿಗೆ ಹೇಳಿಕಳುಹಿಸಿ, "ಅಪ್ಪಾ, ಕೋಸಲರಾಜನು 'ಒಬ್ಬ ಧನಶ್ರೇಷ್ಠಿಯನ್ನು ಕರೆದುಕೊಂಡು ಹೋಗುತ್ತೇನೆ' ಎನ್ನುತ್ತಾನೆ. ನೀನು ಆತನೊಡನೆ ಹೋಗು." ಎಂದನು.

"ತಾವು ಕಳುಹಿಸಿದರೆ ಹೋಗುತ್ತೇನೆ, ಸ್ವಾಮಿ."

"ಹಾಗಾದರೆ, ಸಜ್ಜುಮಾಡಿಕೊಂಡು, ಹೋಗಿ ಬಾ, ಅಪ್ಪ."

ಆಗ ಆತನು ಮಾಡಬೇಕಾದ ಸಿದ್ಧತೆಗಳನ್ನು ಮಾಡಿಕೊಂಡನು. ರಾಜನೂ ಆತನಿಗೆ ಮಹತ್ತಾದ ಸತ್ಕಾರಗಳನ್ನು ಮಾಡಿ, "ಈತನನ್ನು ಕರೆದುಕೊಂಡು ಹೋಗು." ಎಂದು ಪ್ರಸೇನಜಿತನಿಗೆ ಒಪ್ಪಿಸಿದನು.

ಪ್ರಸೇನಜಿತ್ ರಾಜನು ಆತನನ್ನು ಸಂಗಡ ಕೊಂಡು, ಶ್ರಾವಸ್ತಿಗೆ ಹೊರಟನು. ಒಂದು ರಾತ್ರಿ ಪ್ರಯಾಣಮಾಡಿದರು. ಒಂದುಕಡೆ ಸಸ್ಯಜಲ ಸಮೃದ್ಧಿಯಾದ ಒಂದು ಮನೋಹರವಾದ ಪ್ರದೇಶದಲ್ಲಿ ಆ ರಾತ್ರಿಗೆ ಬೀಡುಬಿಟ್ಟರು.

ಆಗ ಧನಂಜಯಶ್ರೇಷ್ಠಿ ಪ್ರಶ್ನಿಸಿದನು :

"ಇದು ಯಾರ ದೇಶ ?"

"ಇದು ನನ್ನದು. ಶ್ರೇಷ್ಠಿ."

"ಇಲ್ಲಿಂದ, ಶ್ರಾವಸ್ತಿ ಎಷ್ಟು, ದೂರ ?"

"ಏಳು ಯೋಜನ ಮಾತ್ರ."

"ನಗರದ ಒಳಗೆ ಇಕ್ಕಟ್ಟು. ನನ್ನ ಪರಿಜನರೋ ಬಹಳ. ಆದ್ದರಿಂದ, ಅರಸು ಒಪ್ಪಿದರೆ, ಇಲ್ಲೇ ಇದ್ದುಬಿಡುತ್ತೇವೆ. ಸ್ವಾಮಿ."

"ಒಳ್ಳೆಯದು." ಎಂದು ರಾಜನು ಸಮ್ಮತಿಸಿದನು. ಅದೇ ಸ್ಥಳದಲ್ಲಿ ಒಂದು ನಗರವನ್ನು ನಿರ್ಮಾಣಮಾಡಿಸಿ, ಅದನ್ನು ಆ ಶ್ರೇಷ್ಠಿಗೆ ಕೊಟ್ಟು ಹೋದನು.

ಹೀಗೆ, ಸಾಯಂಕಾಲದಲ್ಲಿ ಆ ನಗರದ ವಾಸ ಆರಂಭವಾದುದರಿಂದ ಅದಕ್ಕೆ "ಸಾಕೇತ" ಎಂದು ಹೆಸರಾಯಿತು.

— ೩ —

ಇತ್ತ, ಶ್ರಾವಸ್ತಿಯಲ್ಲಿ ಒಬ್ಬ ಶ್ರೇಷ್ಠಿ : ಮಿಗಾರ ಎಂದು ಆತನ ಹೆಸರು. ಆತನ ಮಗನಾದ ಪೂರ್ಣವರ್ಧನ ಕುಮಾರನು ಆಗತಾನೆ ವಯಃಪ್ರಾಪ್ತನಾಗಿದ್ದನು.

ಆತನಿಗೆ ತಾಯಿ ತಂದೆ ಹೇಳಿದರು : "ಅಪ್ಪ. ನಿನಗೆ ರುಚಿ ಕಂಡ ಕಡೆಯಿಂದ ಒಂದು ಹೆಣ್ಣನ್ನು ಆರಿಸಿಕೊ."

"ನನಗೆ ಇಂತಹ ಗೋಜಿನಿಂದ ಆಗಬೇಕಾದ್ದು ಏನೂ ಇಲ್ಲ."

"ಹಾಗೆ ಮಾಡಬೇಡ, ಮಗು. ಮಕ್ಕಳಿಲ್ಲದ ಮನೆ ಕುಲ ಉಳಿಯುವುದಿಲ್ಲ."

ಅವರು ಪುನಃಪುನಃ ಹಾಗೆ ಹೇಳಿದರೆ, ಆತ ಹೀಗೆಂದನು :

"ಹಾಗಾದರೆ, ಐದು ಕಲ್ಯಾಣಗುಣಗಳಿಂದ ಕೂಡಿದವಳಾದ ಹೆಣ್ಣು ದೊರಕಿದರೆ, ನಿಮ್ಮ ಮಾತನ್ನು ನಡಸಿಕೊಡುತ್ತೇನೆ."

"ಈ ಐದು ಕಲ್ಯಾಣಗುಣಗಳು ಇವು ಯಾವುವು, ಮಗು?"

"ಕೇಶಕಲ್ಯಾಣ, ಮಾಂಸಕಲ್ಯಾಣ, ಅಸ್ಥಿಕಲ್ಯಾಣ, ಛವಿಕಲ್ಯಾಣ, ವಯೋಕಲ್ಯಾಣ—ಎಂಬುವು ಈ ಐದು ಕಲ್ಯಾಣಗಳು."

"ಕೇಶಕಲ್ಯಾಣ ಎಂಬುದು ಏನು, ಮಗು?"

"ಮಹತ್ತಾದ ಪುಣ್ಯಮಾಡಿದ ಹೆಂಗಸಿಗೆ ತಲೆಗೂದಲು ನವಿಲಿನ ತೋಕೆಯ ಹಾಗಿರುತ್ತದೆ. ಬಿಚ್ಚಿ ಕೆಳಗೆ ಬಿಟ್ಟರೆ, ಉಡೆಯ ಅಂಚಿನ ವರೆಗೂ ಮುಟ್ಟುತ್ತದೆ; ಕೂದಲಿನ ಕೊನೆ ಉಂಗುರವಾಗಿ ಮೇಲಕ್ಕೆ ಸುರುಳಿ ಸುತ್ತಿರುತ್ತದೆ. ಇದು ಕೇಶಕಲ್ಯಾಣ."

"ಮತ್ತೆ, ಮಾಂಸಕಲ್ಯಾಣವೆಂಬುದು ಏನು, ಮಗು?"

"ಬಾಯಿಗೆ ತೆರೆಯಾದ ತುಟಿ ಬಿಂಬಫಲಕ್ಕೆ ಸದೃಶವಾಗಿ, ಬಣ್ಣ ಬಣ್ಣವಾಗಿ, ಸಮವಾಗಿ, ಸ್ಪರ್ಶಕ್ಕೆ ಮೃದುವಾಗಿ ಇರುತ್ತದೆ. ಇದು ಮಾಂಸಕಲ್ಯಾಣ."

"ಇನ್ನು, ಈ ಅಸ್ಥಿಕಲ್ಯಾಣವೆಂಬುದು ಏನು, ಮಗು?"

"ಹಲ್ಲುಗಳು ಬೆಳ್ಳಗಿರಬೇಕು, ಸಮನಾಗಿರಬೇಕು, ಒಂದೊಂದರ ನಡುವೆ ಸಂದು ಇರಬಾರದು, ವಜ್ರದ ಪಂಕ್ತಿಯನ್ನು ನೆಟ್ಟಗೆ ಸಿಲ್ಲಿಸಿದಂತೆ ಹೊಳೆಯುತ್ತಿರಬೇಕು, ಶಂಖದ ಪಾತ್ರೆಯಂತೆ ಶೋಭಿಸುತ್ತಿರಬೇಕು. ಇದು ಅಸ್ಥಿಕಲ್ಯಾಣವೆಂಬುದು."

"ಅನಂತರ, ಈ ಛವಿಕಲ್ಯಾಣವೆಂಬುದು ಏನು, ಮಗು?"

"ಚಂದನವನ್ನಾಗಲಿ ಇತರ ವರ್ಣಕಗಳನ್ನಾಗಲಿ ಲೇಪಿಸದಿದ್ದರೂ ಚರ್ಮವು ನೀಲೋತ್ಪಲದ ಹಾರದಂತೆ ನುಣುಪಾಗಿರಬೇಕು, ಕರ್ಣಿಕಾರ ಪುಷ್ಪದ ಹಾರದ ಹಾಗೆ ಶುಭ್ರವಾಗಿರಬೇಕು. ಇದು ಛವಿಕಲ್ಯಾಣ ವೆಂಬುದು."

"ಕಡೆಗೆ, ಈ ವಯೋಕಲ್ಯಾಣವೆಂಬುದು ಏನು, ಮಗು?"

"ಹತ್ತುಸಲ ಆಕೆ ಪ್ರಸವಿಸಿದರೂ, ಆಗ ತಾನೆ ಇದೇ ಚೊಚ್ಚಿಲ

ಪ್ರಸವವೋ ಎಂಬಂತೆ ಯೌವನವನ್ನು ಕಳೆದುಕೊಳ್ಳದೆ ಇರಬೇಕು. ಇದು ವಯೋಕಲ್ಯಾಣವೆಂಬುದು."

ಆಗ ಪೂರ್ಣವರ್ಧನನ ತಾಯಿತಂದೆ ನೂರೆಂಟು ಮಂದಿ ಬ್ರಾಹ್ಮಣರನ್ನು ಮನೆಗೆ ಕರೆದು, ಅವರಿಗೆ ಭೋಜನಮಾಡಿಸಿ, ಅವರನ್ನು ಕೇಳಿದರು :

"ಇಂತಿಂತಹ ಐದು ಕಲ್ಯಾಣಗುಣಗಳನ್ನುಳ್ಳ ಹೆಂಗಸರೆಂಬವರು ಇರುವರೆ?"

"ಹೌದು, ಇರುವರು."

"ಹಾಗಾದರೆ, ಅಂತಹ ಹುಡುಗಿಯನ್ನು ಹುಡುಕಿಕೊಂಡು ಬರುವುದಕ್ಕಾಗಿ, ನಿಮ್ಮಲ್ಲಿ ಎಂಟು ಜನ ಹೋಗಿರಿ." ಎಂದು ಅವರಿಗೆ ಬಹುಧನವನ್ನು ಕೊಟ್ಟರು.

"ಹಿಂದಿರುಗಿ ಬಂದಾಗ, ಮಾಡಬೇಕಾದ ಕರ್ತವ್ಯವನ್ನು ನೋಡೋಣ. ಅಂತಹ ಕನ್ಯೆಯನ್ನು ಹುಡುಕಿಕೊಂಡು, ನೀವು ಹೋಗಿರಿ. ಕಂಡ ಕಾಲದಲ್ಲಿ, ಈ ಹಾರದಿಂದ ಅವಳಿಗೆ ಅಲಂಕಾರ ಮಾಡಿರಿ." ಎಂದು ನೂರು ಸಾವಿರ ಬೆಲೆ ಬಾಳುವ ಸುವರ್ಣಮಾಲೆಯನ್ನು ಕೊಟ್ಟು, ಕಳುಹಿಸಿದರು.

ಆ ಬ್ರಾಹ್ಮಣರು ಮಹಾ ಮಹಾ ನಗರಗಳಿಗೆಲ್ಲ ಹೋಗಿ, ಹುಡುಕಿದರು. ಐದು ಕಲ್ಯಾಣಗಳಿಂದ ಕೂಡಿದ ಕನ್ಯೆಯನ್ನು ಕಾಣದೆ, ಹಿಂದಿರುಗಿದರು. ಹಾಗೆ ಬರುವಾಗ, ಸಾಕೇತಕ್ಕೆ ಬಂದರು. ಆ ದಿನ ಅಲ್ಲಿ ಯಾವುದೋ ನಕ್ಷತ್ರದ ದಿವಸ.

"ಈ ದಿನ ನಮ್ಮ ಕಾರ್ಯ ಕೈಗೂಡುತ್ತದೆ." ಎಂದು ಚಿಂತಿಸಿದರು.

ಆ ನಗರದಲ್ಲಿ ವರ್ಷವರ್ಷವೂ ಆ ನಕ್ಷತ್ರದ ದಿವಸವನ್ನು ಸಾರ್ವತ್ರಿಕ ಉತ್ಸವದಂತೆ ಆಚರಿಸುವರು. ಇತರ ದಿವಸಗಳಲ್ಲಿ ಹೊರಗೆ ಹೊರಡದಿರುವ ಮನೆಗಳವರು ಕೂಡ ಆ ದಿನ ತಮ್ಮ ಪರಿವಾರದೊಡನೆ ಮನೆಯಿಂದ ಬರುವರು. ಮುಚ್ಚುಮರೆಗಳಿಲ್ಲದೆ, ಪಾದಚಾರಿಗಳಾಗಿ ನದೀ

ತೀರಕ್ಕೆ ಹೋಗುವರು. ಅದೇ ದಿವಸವೇ ಕ್ಷತ್ರಿಯರ ಪುತ್ರರೂ ಮಹಾಧನವಂತರ ಮಕ್ಕಳೂ "ಅಲ್ಲಿ ಬಂದ ಕನ್ಯೆಯರಲ್ಲಿ ನಮಗೆ ಸಮಾನಜಾತಿಯರಾದ ಕುಲಕನ್ಯೆಯರು ಮೆಚ್ಚಿಕೆ ಕಂಡರೆ, ಮಾಲೆ ಹಾಕೋಣ" ಎಂದುಕೊಂಡು. ಮಾರ್ಗದಲ್ಲಿ ನಿಲ್ಲುವರು.

ಶ್ರಾವಸ್ತಿಯಿಂದ ಹೊರಟ ಆ ಬ್ರಾಹ್ಮಣರು ತಾವೂ ಅದೇ ನದೀತೀರದ ಒಂದು ಜನಶಾಲೆಯನ್ನು ಪ್ರವೇಶಿಸಿ, ನಿಂತರು.

ಅದೇ ಕ್ಷಣದಲ್ಲಿ, ವಿಶಾಖಾ, ಆಗ ಆಕೆಗೆ ಹದಿನೈದು ಹದಿನಾರು ವರ್ಷ ಪ್ರಾಯ, ಸರ್ವಾಭರಣಗಳಿಂದ ಅಲಂಕೃತಳಾಗಿ, ಐನೂರು ಕುಮಾರಿಯರ ಪರಿವಾರದೊಡನೆ, 'ಸ್ನಾನಮಾಡುವೆ'ನೆಂದು ನದಿಗೆ ಹೊರಟು, ಆ ಸ್ಥಳಕ್ಕೆ ಬಂದಳು. ಆಗ ಇದ್ದಕ್ಕಿದ್ದಂತೆ ಮೇಘವೆದ್ದು, ಮಳೆ ಹುಯ್ದಿತು. ಐನೂರು ಕುಮಾರಿಯರೂ ವೇಗದಿಂದ ಹೋಗಿ, ಜನಶಾಲೆಯನ್ನು ಪ್ರವೇಶಿಸಿದರು. ಬ್ರಾಹ್ಮಣರು ಅವಲೋಕಿಸಿದರು; ಅವರಲ್ಲಿ ಒಬ್ಬರಾದರೂ ಐದು ಕಲ್ಯಾಣಗಳಿಂದ ಕೂಡಿದವರಂತೆ ಕಂಡು ಬರಲಿಲ್ಲ.

ವಿಶಾಖಾ ಮಾತ್ರ, ಸಹಜವಾದ ನಡಿಗೆಯಿಂದಲೇ ಜನಶಾಲೆಯನ್ನು ಪ್ರವೇಶಿಸಿದಳು. ಆಕೆಯ ವಸ್ತ್ರಾಭರಣಗಳು ನೆನೆದುಹೋಗಿದ್ದುವು.

ಬ್ರಾಹ್ಮಣರು ಆಕೆಯ ನಾಲ್ಕು ಕಲ್ಯಾಣಗಳನ್ನು ಕಂಡರು. ಹಲ್ಲುಗಳನ್ನು ಕಾಣಬೇಕೆಂದುಕೊಂಡು, "ನಮ್ಮ ಈ ಮಗಳು ಆಲಸ್ಯದ ಜಾತಿ. ಇವಳ ಕೈಹಿಡಿದವನಿಗೆ ಗಂಜಿಕೂಡ ದೊರಕುವುದಿಲ್ಲ ಎಂದು ಕಾಣುತ್ತೆ!" ಎಂದು ಒಬ್ಬರಿಗೊಬ್ಬರು ಮಾತನಾಡಿಕೊಂಡರು.

ಆಗ ವಿಶಾಖಾ ಕೇಳಿದಳು: "ಏನೆಂದಿರಿ, ನೀವು?"

"ನಿನ್ನ ವಿಷಯವೇ ಆಡುತ್ತಿದ್ದೆವು, ಅಮ್ಮ."

ಆಕೆಯ ಧ್ವನಿ ಮಧುರವಾಗಿತ್ತಂತೆ, ಕಂಚಿನ ತಾಳದ ಸ್ವರದ ಹಾಗೆ ಠಣಗುಡುತ್ತಿತ್ತಂತೆ.

ಆಕೆ ಪುನಃ ಮಧುರ ಸ್ವರದಿಂದ "ಏನು ಮಾತನಾಡುತ್ತಿದ್ದಿರಿ?" ಎಂದು ಕೇಳಿದಳು.

"ನಿನ್ನ ಪರಿವಾರದ ಸ್ತ್ರೀಯರು ತಮ್ಮ ವಸ್ತ್ರಾಲಂಕಾರಗಳನ್ನು ನೆನೆಸಿಕೊಳ್ಳದೆ, ವೇಗದಿಂದ ಶಾಲೆಯನ್ನು ಪ್ರವೇಶಿಸಿದರು. ನೀನು ಒಬ್ಬಳು ಮಾತ್ರ, ಇಷ್ಟೇ ದೂರವಿದ್ದರೂ, ವೇಗದಿಂದ ಬಾರದೆ, ನಿನ್ನ ವಸ್ತ್ರಾಭರಣಗಳನ್ನು ಒದ್ದೆಮಾಡಿಕೊಂಡುಬಂದೆ –ಎಂದು ಮಾತನಾಡಿಕೊಳ್ಳುತ್ತಿದ್ದೆವು."

"ಅಯ್ಯಾ, ನೀವು ಹಾಗೆ ಹೇಳಬೇಡಿ. ನಾನು ಇವರೆಲ್ಲರಿಗಿಂತ ಹೆಚ್ಚು ಬಲವುಳ್ಳವಳು. ನಾನು ವೇಗದಿಂದ ಬಾರದೆ ಇದ್ದುದಕ್ಕೆ ಕಾರಣವಿಲ್ಲದೆ ಇಲ್ಲ."

"ಏನು ಕಾರಣ, ಅಮ್ಮ?"

"ಅಯ್ಯಾ, ನಾಲ್ಕು ರೀತಿಯವರು ವೇಗದಿಂದ ಹೋದರೆ, ಶೋಭಿಸುವುದಿಲ್ಲ. ಅಲ್ಲದೆ, ಇನ್ನೂ ಒಂದು ಕಾರಣ ಉಂಟು."

"ಎಂಥವರು ನಾಲ್ವರು ವೇಗವಾಗಿ ಹೋದರೆ, ಶೋಭಿಸುವುದಿಲ್ಲ?"

"ಅಯ್ಯಾ, ಅಭಿಷಿಕ್ತನಾದ ರಾಜನು, ಸರ್ವಾಭರಣಗಳಿಂದ ಅಲಂಕೃತನಾಗಿ, ಕಚ್ಚೆಯನ್ನು ಬಿಗಿದು, ರಾಜಾಂಗಣದಲ್ಲಿ ವೇಗವಾಗಿ ಹೋದರೆ, ಅದು ಅವನಿಗೆ ಶೋಭಿಸುವುದಿಲ್ಲ. 'ಇದು ಏಕೆ ಈ ಮಹಾರಾಜನು ಸಾಮಾನ್ಯನಾದ ಗೃಹಸ್ಥನ ಹಾಗೆ ಹೀಗೆ ಓಡುತ್ತಾನೆ!' ಎಂದು ಕಂಡವರು ಆತನನ್ನು ನಿಂದಿಸುತ್ತಾರೆ. ಅದರಂತೆಯೇ ರಾಜನ ಪಟ್ಟದ ಆನೆ ಅಲಂಕಾರ ಮಾಡಿಕೊಂಡು ವೇಗವಾಗಿ ಓಡಿದರೆ, ಅದು ಶೋಭಿಸುವುದಿಲ್ಲ; ಅದು ತನಗೆ ಸಹಜವಾದ ವಾರಣಲೀಲೆಯಿಂದ ನಡೆದರೆ, ಅದು ಅದಕ್ಕೆ ಶೋಭಿಸುತ್ತದೆ. ಹಾಗೆಯೇ ಪ್ರವ್ರಜಿತನಾದವನು ವೇಗವಾಗಿ ಹೋದರೆ, ಅದೂ ಶೋಭಿಸುವುದಿಲ್ಲ; ಸಂಸಾರವನ್ನು ತೊರೆದ ಈ ಶ್ರಮಣನು ಏಕೆ ಸಂಸಾರಿಯಂತೆ ಧಾವಿಸುತ್ತಿದ್ದಾನೆ!' ಎಂದು ನಿಂದೆಗೆ ಗುರಿಯಾಗುತ್ತಾನೆ; ಆದರೆ ಸಮಾಧಾನವಾದ ಗಮನವಿದ್ದರೆ, ಅದು ಅವನಿಗೆ ಶೋಭಿಸುತ್ತದೆ. ಅದರ ಹಾಗೆಯೇ, ಅಯ್ಯಾ, ಸ್ತ್ರೀಗೆ ವೇಗ ಶೋಭಿಸುವುದಿಲ್ಲ. 'ಈ ಹೆಂಗಸು ಏಕೆ ಗಂಡಸಿನ ಹಾಗೆ ಓಡುತ್ತಾಳೆ!' ಎಂದು ಅವಳನ್ನು ನಿಂದಿಸುತ್ತಾರೆ. ಹೀಗೆ, ಈ ನಾಲ್ವರು ವೇಗವಾಗಿ ಹೋದರೆ, ಶೋಭಿಸುವುದಿಲ್ಲ."

"ಇದಲ್ಲದೆ, ಇನ್ನೂ ಒಂದು ಕಾರಣವೆಂದೆಯಲ್ಲ, ಅದು ಏನಮ್ಮ?"

"ಅಯ್ಯಾ, ತಾಯಿ ತಂದೆ ಎಂಬವರು ತಮ್ಮ ಮಗಳ ಅಂಗ ಪ್ರತ್ಯಂಗಗಳನ್ನು ಪಾಲಿಸಿ ಪೋಷಿಸುತ್ತಾರೆ. ನಾವು ವಿಕ್ರಯವಾಗುವಂಥ ವಸ್ತುಗಳೆಂಬವರು, ಪರಕುಲಕ್ಕೆ ಕಳುಹಿಸುವುದಕ್ಕಾಗಿ ನಮ್ಮನ್ನು ಪೋಷಿಸುವರು. ಒಂದು ವೇಳೆ, ನಾವು ವೇಗವಾಗಿ ಹೋಗುವಾಗ ಸೀರೆಯ ಅಂಚು ಸಿಕ್ಕಿಯೋ ನೆಲದ ಮೇಲೆ ಎಡವಿಯೋ ಬಿದ್ದರೆ, ಬಿದ್ದಾಗ ಕೈಯೋ ಕಾಲೋ ಒಡೆದರೆ, ನಮ್ಮ ಮನೆಗೇ ನಾವು ಭಾರವಾಗುತ್ತೇವೆ. ವಸ್ತ್ರಾಭರಣಗಳು ನೆನೆದುಹೋದರೆ, ಮತ್ತೆ ಒಣಗುತ್ತವೆ. ಈ ಕಾರಣವನ್ನು ಗಮನದಲ್ಲಿರಿಸಿಕೊಂಡು, ನಾನು ಧಾವಿಸಲಿಲ್ಲ, ಅಯ್ಯಾ."

ಬ್ರಾಹ್ಮಣರು, ಆಕೆ ಮಾತನಾಡುವ ಹೊತ್ತಿನಲ್ಲಿ ಆಕೆಯ ದಂತ ಸಂಪತ್ತಿಯನ್ನು ಕಂಡು, "ಇಂತಹ ದಂತಸಂಪದವನ್ನು ಇದುವರೆಗೆ ನಾವು ಹಿಂದೆಂದೂ ಕಂಡದ್ದಿಲ್ಲ!" ಎಂದು, ಆಕೆ ಹೇಳಿದ ಮಾತನ್ನು ಮೆಚ್ಚಿಕೊಂಡರು.

"ಅಮ್ಮ, ಇದು ನಿನಗೆ ಅನುರೂಪವಾದದ್ದು" ಎಂದು ಹೇಳಿ, ತಾವು ತಂದಿದ್ದ ಸುವರ್ಣಮಾಲೆಯಿಂದ ಆಕೆಯನ್ನು ಅಲಂಕರಿಸಿದರು.

ಆಗ ಆಕೆ ಕೇಳಿದಳು :

"ಯಾವ ನಗರದಿಂದ ಬಂದವರು ನೀವು, ಅಯ್ಯ?"

"ಶ್ರಾವಸ್ತಿಯಿಂದ, ಅಮ್ಮ."

"ನಿಮ್ಮನ್ನು ಕಳುಹಿಸಿದ ಶ್ರೇಷ್ಠಿಕುಲದ ಹೆಸರೇನು?"

"ಮಿಗಾರ ಶ್ರೇಷ್ಠಿಯೆಂದು, ಅಮ್ಮ."

"ಆರ್ಯಪುತ್ರನ ಹೆಸರೇನು?"

"ಪೂರ್ಣವರ್ಧನ ಕುಮಾರನೆಂದು, ಅಮ್ಮ."

ಆಕೆ "ನಮಗೆ ಸಮಾನವಾದ ಜಾತಿ, ಸಮಾನವಾದ ಕುಲ" ಎಂದು ಅವರನ್ನು ಒಪ್ಪಿ, ತಂದೆಗೆ ಸುದ್ದಿಯನ್ನು ಹೇಳಿಕಳುಹಿದಳು :

"ನಮಗೆ ಒಂದು ರಥವನ್ನು ಕಳುಹಿಕೊಡಲಿ."

ಆಕೆ ಬರುವಾಗ ತಾನು ಪಾದಚಾರಿಯಾಗಿ ಬಂದವಳಾದರೂ, ಆ

ಸುವರ್ಣಮಾಲೆಯನ್ನು ಹಾಕಿದ ಹೊತ್ತಿನಿಂದ, ನಡೆದು ಹೋಗುವುದು ತನಗೆ ತಕ್ಕದ್ದಲ್ಲ. ಐಶ್ವರ್ಯವಂತರ ಹೆಣ್ಣುಮಕ್ಕಳು ರಥಾದಿಗಳಲ್ಲಿ ಹೋಗುವರು; ಇತರರು ಸಾಮಾನ್ಯವಾದ ಗಾಡಿಯಲ್ಲಿ, ಅಥವಾ ಛತ್ರಿಯನ್ನೋ ತಾಳೆಯೆಲೆಯನ್ನೋ ಹಿಡಿದು ಅದರ ನೆರಳಲ್ಲಿ, ಹೋಗುವರು; ಅದು ಯಾವುದೂ ಇಲ್ಲದಿದ್ದರೆ, ಉಟ್ಟ ಬಟ್ಟೆಯಲ್ಲಿಯೇ ಒಂದು ಅಂಚನ್ನು ತಲೆಯ ಮೇಲೆ ಎಳೆದುಕೊಳ್ಳುವರು.

ವಿಶಾಖೆಯ ತಂದೆ ಐದು ನೂರು ರಥಗಳನ್ನು ಕಳುಹಿಸಿದನು. ವಿಶಾಖಾ ತನ್ನ ರಥವನ್ನು ಏರಿ, ಪರಿವಾರದೊಡನೆ ಹೊರಟಳು. ಬ್ರಾಹ್ಮಣರೂ ಆಕೆಯ ಜೊತೆಯಲ್ಲೆ ಹೋದರು.

ಧನಂಜಯ ಶ್ರೇಷ್ಠಿ ಆ ಬ್ರಾಹ್ಮಣರನ್ನು ಪ್ರಶ್ನಿಸಿದನು:

"ಎಲ್ಲಿಂದ ದಯೆಮಾಡಿದಿರಿ?"

"ಶ್ರಾವಸ್ತಿಯಿಂದ, ಮಹಾಶ್ರೇಷ್ಠಿ."

"ಅಲ್ಲಿನ ಶ್ರೇಷ್ಠಿಯ ಹೆಸರೇನು?"

"ಮಿಗಾರ ಶ್ರೇಷ್ಠಿ, ಎಂದು."

"ಆತನ ಪುತ್ರನ ಹೆಸರೇನು?"

"ಪೂರ್ಣವರ್ಧನ ಕುಮಾರ, ಎಂದು."

"ಧನ ಎಷ್ಟು ಮಟ್ಟು?"

"ನಲವತ್ತು ಕೋಟಿ, ಮಹಾಶ್ರೇಷ್ಠಿ."

"ನಮ್ಮ ಧನದ ಜೊತೆಗೆ ಅದು ಕವಡೆಯ ಸಮಾನ. ಆದರೆ ಮಗಳಿಗೆ ರಕ್ಷಕನಾಗುವವನು ದೊರಕಿದ ಸಮಯದಲ್ಲಿ, ಇತರ ಕಾರಣಗಳನ್ನು ಕಟ್ಟಿಕೊಂಡು ಏನಾಗಬೇಕು?"

ಎಂದು, ಶ್ರೇಷ್ಠಿಯು ಅವರ ಸಂಬಂಧಕ್ಕೆ ಸಮ್ಮತಿಸಿ, ಆ ಬ್ರಾಹ್ಮಣರಿಗೆ ಎರಡು ದಿವಸ ತನ್ನ ಮನೆಯಲ್ಲಿ ಸತ್ಕಾರಮಾಡಿ, ಅವರನ್ನು ಕಳುಹಿಕೊಟ್ಟನು.

— ೪ —

ಬ್ರಾಹ್ಮಣರು ಶ್ರಾವಸ್ತಿಗೆ ಹೋದರು. "ಹುಡುಗಿಯು ಲಭಿಸಿದಳು." ಎಂದು ಮಿಗಾರಶ್ರೇಷ್ಠಿಗೆ ತಿಳಿಯಪಡಿಸಿದರು.

"ಯಾರ ಮಗಳು ?"

"ಧನಂಜಯಶ್ರೇಷ್ಠಿಯ ಮಗಳು."

"ಮಹಾಕುಲದ ಮಗಳು ಲಭಿಸಿದಳು. ಬೇಗನೇ ಆಕೆಯನ್ನು ಕರೆದುಕೊಂಡು ಬರುವುದು ತಕ್ಕದ್ದು." ಎಂದು ಮಿಗಾರನು ತನ್ನ ಪ್ರಯಾಣವನ್ನು ಅರಸನಿಗೆ ನಿವೇದಿಸಿದನು.

"ಇದು ನಾನು ಬಿಂಬಿಸಾರನ ಬಳಿಯಿಂದ ಕರೆದುತಂದು, ಸಾಕೇತದಲ್ಲಿ ನೆಲೆಗೊಳಿಸಿದ ಮಹಾಕುಲ. ಇವರಿಗೆ ಸನ್ಮಾನಮಾಡುವುದು ತಕ್ಕದ್ದು." ಎಂದು ರಾಜನು ಆಲೋಚಿಸಿ, ''ನಾನೂ ಬರುತ್ತೇನೆ'' ಎಂದನು.

ಮಿಗಾರನು ''ಒಳ್ಳೆಯದು, ದೇವ'' ಎಂದು ಹೇಳಿ, ಧನಂಜಯ ಶ್ರೇಷ್ಠಿಗೆ ಸುದ್ದಿಯನ್ನು ಕಳುಹಿಸಿದನು : ''ನಾನು ಬರುವಾಗ ರಾಜನೂ ಬರುತ್ತಾನೆ, ಮಹತ್ತಾದ ರಾಜನ ಬಲವೂ ಬರುತ್ತದೆ. ಇಷ್ಟೆಲ್ಲ ಜನಕ್ಕೂ ಮಾಡಬೇಕಾದ್ದನ್ನು ಮಾಡಲು ನಿನಗೆ ಸಾಧ್ಯವೋ ಇಲ್ಲವೋ? "

ಅದಕ್ಕೆ ಧನಂಜಯನು ''ಹತ್ತು ಜನ ರಾಜರುಗಳು ಬರುವುದಾದರೂ ಬರಲಿ'' ಎಂದು ಉತ್ತರ ಕಳುಹಿದನು.

ಆಗ ಮಿಗಾರಶ್ರೇಷ್ಠಿಯು ನಗರದ ಮನೆಗಳನ್ನು ಕಾಯುವುದಕ್ಕೆ ಎಷ್ಟು ಬೇಕೋ ಅಷ್ಟು ಹೊರತಾಗಿ ಉಳಿದ ಜನವನ್ನೆಲ್ಲಾ ಕರೆದುಕೊಂಡು, ಸಾಕೇತದಿಂದ ಅರ್ಧಯೋಜನ ದೂರ ಇರುವಾಗ ನಿಂತು, ''ನಾವು ಬಂದಿದ್ದೇವೆ." ಎಂದು ಸುದ್ದಿಯನ್ನು ಕಳಿಸಿದನು.

ಧನಂಜಯಶ್ರೇಷ್ಠಿಯು ಬಹುವಾದ ಪಾರಿತೋಷಕಗಳನ್ನು ದೂತರ ಕೈಲಿ ಕಳಿಸಿಕೊಟ್ಟು, ಮಗಳ ಸಂಗಡ ಹೀಗೆಂದು ಮಂತ್ರಾಲೋಚನೆ ಮಾಡಿದನು :

"ಅಮ್ಮ, ನಿನ್ನ ಮಾವನು ಕೋಸಲರಾಜನ ಜೊತೆಯಲ್ಲಿ ಬಂದಿದ್ದಾನೆ. ಆತನಿಗೆ ಯಾವ ಮನೆ ಬಿಡಿಸಿಕೊಡೋಣ? ರಾಜನಿಗೆ ಯಾವುದು? ಉಪರಾಜಾದಿಗಳಿಗೆ ಯಾವುದು ಯಾವುದು?"

ಶ್ರೇಷ್ಠಿಯ ಮಗಳು ಪಂಡಿತೆ, ವಜ್ರದ ಅಗ್ರದಂತೆ ತೀಕ್ಷ್ಣವಾದ ಜ್ಞಾನವುಳ್ಳವಳು. ಅನೇಕ ಕಲ್ಪಶತಸಹಸ್ರಗಳು ಮತ್ತೆ ಮತ್ತೆ ಮಾಡಿಕೊಂಡ ಸಂಕಲ್ಪಗಳ ಫಲವಾಗಿ ಬುದ್ಧಿಮತಿಯಾಗಿದ್ದಳು.

"ನನ್ನ ಮಾವನವರಿಗೆ ಇಂಥ ಮನೆ, ರಾಜನಿಗೆ ಇಂಥದು, ಉಪರಾಜಾದಿಗಳಿಗೆ ಇಂಥದು." ಎಂದು ವಿಧಾಯಕಮಾಡಿದಳು. ದಾಸರನ್ನೂ ಕೆಲಸಗಾರರನ್ನೂ ಕರೆಕಳುಹಿ, "ಇಷ್ಟು ಜನ ರಾಜನು ಹೇಳಿದ ಕೆಲಸ ಮಾಡಿಕೊಂಡಿರಿ. ಇಷ್ಟು ಜನ ಉಪರಾಜರ ಸೇವೆ ಮಾಡಿ. ನೀವು ಆನೆ ಕುದುರೆ ಮೊದಲಾದುವನ್ನು ನೋಡಿಕೊಳ್ಳಿ. ಬಂದವರು ಯಾವ ಆತಂಕವೂ ಇಲ್ಲದೆ ಮಂಗಲಕಾರ್ಯಗಳನ್ನು ನೋಡಿ ಅನುಭವಿಸಲಿ." ಎಂದು ವಿಧಿಸಿದಳು.

ಹೀಗೆ ತಾನೇ ನಿಂತು, ಎಲ್ಲ ಏರ್ಪಾಟನ್ನೂ ವಿಧಿಸುವುದಕ್ಕೆ ಏನು ಕಾರಣ?

ಕಾರಣ ಇಷ್ಟೆ: "ವಿಶಾಖೆಯ ಮದುವೆಗೆ ನಾವು ಹೋಗಿದ್ದೆವು. ಅಲ್ಲಿ ಆನೆ ಕುದುರೆಗಳನ್ನು ನೋಡಿಕೊಳ್ಳುತ್ತಿದ್ದುದು ಆಯಿತೇ ಹೊರತು, ನಾವು ಏನೂ ನೋಡಲಿಲ್ಲ, ಮಾಡಲಿಲ್ಲ." ಎಂದು ಯಾವ ಮಾತೂ ಬಾರದಿರಲಿ, ಎಂದು.

ಅದೇ ದಿವಸವೇ ವಿಶಾಖೆಯ ತಂದೆ ಐದುನೂರು ಅಕ್ಕಸಾಲಿಗರನ್ನು ಕರೆಕಳುಹಿಸಿ, "ನನ್ನ ಮಗಳಿಗಾಗಿ ಮಹಾಲತಾಪ್ರಸಾಧನವೆಂಬ ಆಭರಣವನ್ನು ಮಾಡಿಕೊಡಿ." ಎಂದು, ರಕ್ತಸುವರ್ಣದ ಸಾವಿರ ನಿಷ್ಕಗಳನ್ನೂ ಅದಕ್ಕೆ ಅನುರೂಪವಾದ ಬೆಳ್ಳಿ ಕೆಂಪು ಮುತ್ತು ಹವಳ ವಜ್ರ ಮೊದಲಾದುವನ್ನೂ ಕೊಟ್ಟನು.

ರಾಜನು ಕೆಲವು ಹಗಲು ತಂಗಿದ್ದು, ಧನಂಜಯಶ್ರೇಷ್ಠಿಗೆ ಹೀಗೆಂದು ಸುದ್ದಿ ಹೇಳಿಕಳುಹಿಸಿದನು:

"ನಮ್ಮನ್ನು ಕಾಪಾಡಿ ಪೋಷಿಸುವುದು ಶ್ರೇಷ್ಠಿಯಿಂದ ಸಾಧ್ಯವಿಲ್ಲ. ಮಗಳನ್ನು ಕಳುಹಿಸಿಕೊಡುವ ಕಾಲವನ್ನು ತಿಳಿಸಲಿ."

ಅವನು ರಾಜನಿಗೆ ಉತ್ತರ ಹೇಳಿಕಳಿಸಿದನು:

"ಈಗ ತಾನೆ ಮಳೆಗಾಲ ಬಂದಿದೆ. ಇನ್ನು ನಾಲ್ಕು ತಿಂಗಳು ಓಡಿಯಾಡುವುದು ಸಾಧ್ಯವಿಲ್ಲ. ನಿಮ್ಮ ಸೈನ್ಯಕ್ಕೆ ಏನೇನು ಬೇಕೋ ಅದನ್ನು ಒದಗಿಸುವುದು ನನ್ನ ಭಾರ. ನಾನು ಕಳುಹಿಸಿಕೊಟ್ಟಾಗ ತಾವು ಹೋಗಬಹುದು."

ಅಂದಿನಿಂದ ತೊಡಗಿ ಸಾಕೇತನಗರದಲ್ಲಿ ನಿತ್ಯೋತ್ಸವದ ಹಾಗೆ ಆಯಿತು. ರಾಜನಿಂದ ಮೊದಲುಗೊಂಡು ಎಲ್ಲರಿಗೂ ನಾನಾಗಂಧ ವಸ್ತ್ರಗಳಿಂದ ಅಲಂಕಾರವಾಯಿತು. ಪ್ರತಿಯೊಬ್ಬರೂ "ಶ್ರೇಷ್ಠಿಯು ನನಗೆ ಮಾತ್ರವೇ ಸತ್ಕಾರ ಮಾಡುತ್ತಾನೆ." ಎಂದುಕೊಂಡರು.

ಹೀಗೆ ಮೂರು ಮಾಸ ಮುಗಿಯಿತು. ಆದರೆ, ಮಹಾಲತಾ ಪ್ರಸಾಧನ ಮಾತ್ರ ಆಗಲಿಲ್ಲ.

ಕೆಲಸಕಾರ್ಯಗಳ ಮೇಲ್ವಿಚಾರಕರು ಬಂದು ಶ್ರೇಷ್ಠಿಗೆ ತಿಳಿಸಿದರು:

"ಯಾವುದೂ ಇಲ್ಲ ಎಂದು ಹೇಳುವಹಾಗಿಲ್ಲ. ಆದರೆ ಸೈನ್ಯಕ್ಕೆ ಅಡುಗೆ ಮಾಡುವುದಕ್ಕೆ ಬೇಕಾದ ಕಟ್ಟಿಗೆ ಸಾಲದು."

"ಹೋಗಿ. ಈ ನಗರದಲ್ಲಿ ಹಳೆಯದಾಗಿ ಹಾಳುಬಿದ್ದ ಹಸ್ತಿಶಾಲೆಯೇ ಮುಂತಾದ ಮನೆಗಳನ್ನು ಕಿತ್ತು, ಬೇಯಿಸಿರಿ."

ಹೀಗೆ ಪಡೆದ ಕಟ್ಟಿಗೆಯಿಂದ ಬೇಯಿಸಿ, ಅರ್ಧಮಾಸ ಕಳೆಯಿತು.

ಪುನಃ "ಕಟ್ಟಿಗೆ ಇಲ್ಲ" ಎಂದು ಬಂದು ತಿಳಿಸಿದರು.

"ಈ ಕಾಲದಲ್ಲಿ ಕಟ್ಟಿಗೆಯನ್ನು ಸಂಪಾದಿಸುವುದು ಶಕ್ಯವಿಲ್ಲ. ವಸ್ತ್ರಗಳನ್ನು ಶೇಖರಿಸಿರುವ ಭಂಡಾರವನ್ನು ತೆರೆದು, ದಪ್ಪದಪ್ಪ ಬಟ್ಟೆಗಳನ್ನು ಬತ್ತಿಮಾಡಿಕೊಂಡು, ತೈಲದ ಚಟ್ಟಿಗಳಲ್ಲಿ ಅದ್ದಿ, ಅಡಿಗೆಯನ್ನು ಬೇಯಿಸಿ."

ಅವರು ಅರ್ಧಮಾಸ ಹಾಗೆ ಮಾಡಿದರು.

ಹೀಗೆ ನಾಲ್ಕು ತಿಂಗಳು ಕಳೆಯಿತು. ಮಹಾಲತಾಪ್ರಸಾಧನವೂ ಆಗಿ ಮುಗಿಯಿತು.

ಆ ಆಭರಣವನ್ನು ಮಾಡುವುದಕ್ಕೆ ನಾಲ್ಕು ನಾಳಿ ವಜ್ರಗಳನ್ನೂ ಹನ್ನೊಂದು ನಾಳಿ ಮುತ್ತುಗಳನ್ನೂ ಇಪ್ಪತ್ತೆರಡು ನಾಳಿ ಹವಳವನ್ನೂ ಮೂವತ್ತುಮೂರು ನಾಳಿ ಕೆಂಪುಗಳನ್ನೂ, ಇದಲ್ಲದೆ ಇನ್ನೂ ಇತರವಾದ ಸಪ್ತರತ್ನಗಳನ್ನೂ ಉಪಯೋಗಿಸಿದರು. ದಾರವನ್ನು ಉಪಯೋಗಿಸದೆ, ಬೆಳ್ಳಿಯ ನೂಲಿನಿಂದ ಆ ಆಭರಣವನ್ನು ಮಾಡಿದರು. ಅದು ತಲೆಯ ದೆಸೆಯಿಂದ ತೊಡಗಿ ಕಾಲ ಹಿಂದಿನವರೆಗೂ ಇಳಿದುಬರುವುದು. ಅಲ್ಲಲ್ಲಿಗೆ ಮುದ್ರಿಕೆಗಳನ್ನು ಜೋಡಿಸಿದ್ದರು; ಚಿನ್ನದಿಂದ ಮಾಡಿದ ಗ್ರಂಥಿಕೆಗಳು, ಅದನ್ನು ಹಿಡಿಯುವುದಕ್ಕೆ ಬೆಳ್ಳಿಯ ಕೊಕ್ಕೆಗಳು. ತಲೆಯ ನಡುವೆ ಒಂದು ಮುದ್ರಿಕೆ, ಎರಡು ಕಿವಿಗಳ ಹಿಂದೆ ಎರಡು, ಕೊರಳಿನ ಪ್ರದೇಶದಲ್ಲಿ ಒಂದು, ಎರಡು ಮೊಣಕಾಲಿನ ಬಳಿ ಎರಡು, ಎರಡು ಮೊಣಕೈಯ ಬಳಿ ಎರಡು, ನಡುವಿನ ಹತ್ತಿರ ಎರಡು.

ಆ ಮಹಾಲತಾಪ್ರಸಾಧನವೆಂಬ ಆಭರಣದಲ್ಲಿ ಒಂದು ನವಿಲನ್ನು ಮಾಡಿದ್ದರು. ಅದರ ಬಲದ ರೆಕ್ಕೆಯಲ್ಲಿ ರಕ್ತಸುವರ್ಣದಿಂದ ಮಾಡಿದ ಐದುನೂರು ಗರಿಗಳು ಇದ್ದುವು, ಎಡದ ರೆಕ್ಕೆಯಲ್ಲಿ ಐದು ನೂರು ಗರಿಗಳು. ಕೊಕ್ಕು ಹವಳದಿಂದ ಆದದ್ದು, ಕಣ್ಣುಗಳು ಮಣಿಗಳಿಂದ ಆದುವು. ಅದರಂತೆಯೇ ಅದರ ಕೊರಳೂ, ಬಾಲವೂ, ಗರಿಗಳ ಕಡ್ಡಿಯೂ, ಅದರ ಕಾಲುಗಳೂ ರತ್ನಗಳಿಂದ ಆಗಿದ್ದುವು. ಅದು, ಪರ್ವತದ ತುದಿಯಲ್ಲಿ ನಿಂತಿರುವ ನೃತ್ಯಮಯೂರದ ಹಾಗೆ, ವಿಶಾಖೆಯ ಮಸ್ತಕದ ಮಧ್ಯೆ ಕಂಗೊಳಿಸುವುದು. ಅದರ ಒಂದು ಸಾವಿರ ಗರಿಗಳ ಕಡ್ಡಿಯ ಸದ್ದು ದಿವ್ಯ ಸಂಗೀತದಂತೆ, ಐದು ವಿಧವಾದ ತೂರ್ಯಗಳ ಘೋಷದಂತೆ ಕಿವಿಗೆ ಕೇಳುವುದು. ಹತ್ತಿರ ಹೋದ ಹೊರತು, ಅದು ನವಿಲು ಅಲ್ಲವೆಂಬುದು ತಿಳಿಯುತ್ತಿರಲಿಲ್ಲ.

ಇಂಥ ಆಭರಣವನ್ನು ಮಾಡುವುದಕ್ಕೆ ಒಂಬತ್ತುಕೋಟಿ ಬೆಲೆ ತಾಕಿತು, ಕೆಲಸ ಮಾಡಿದುದಕ್ಕೆ ನೂರು ಸಾವಿರ ಬೆಲೆ ಕೊಟ್ಟರು.

ಹೀಗೆ ಆ ಮಹಾಶ್ರೇಷ್ಠಿಯು ನಾಲ್ಕು ತಿಂಗಳುಗಳಲ್ಲಿ ತನ್ನ ಮಗಳಿಗೆ ಆ ಮಂಗಲಾಭರಣವನ್ನು ಮಾಡಿಸಿಯಾದ ಮೇಲೆ, ಆಕೆಗೆ ಬಳುವಳಿ

ಯನ್ನು ಕೊಡಬೇಕೆಂದು ನಾಣ್ಯಗಳಿಂದ ತುಂಬಿದ ಐದು ನೂರು ಗಾಡಿಗಳನ್ನು ಕೊಟ್ಟನು; ಚಿನ್ನದ ಪಾತ್ರೆಗಳಿಂದ ತುಂಬಿದ ಐದು ನೂರು ಗಾಡಿ, ಬೆಳ್ಳಿಯ ಪಾತ್ರೆಗಳು ತುಂಬಿದ ಐದು ನೂರು ಗಾಡಿ, ತಾಮ್ರದ ಪಾತ್ರೆಗಳು ತುಂಬಿದ್ದು ಐದು ನೂರು, ಪಟ್ಟವಸ್ತ್ರ ಪೀತಾಂಬರ ತುಂಬಿದ್ದು ಐದು ನೂರು, ಭತ್ತ ಅಕ್ಕಿ ತುಂಬಿದ್ದು ಐದು ನೂರು, ನೇಗಿಲು ಹಲಗೆ ಮುಂತಾದ ಉಪಕರಣಗಳಿಂದ ತುಂಬಿದ್ದು ಐದು ನೂರು, ಕೊಟ್ಟನು.

ಆತನಿಗೆ ಹೀಗೆನ್ನಿಸಿತಂತೆ: "ನನ್ನ ಮಗಳು ಹೋಗುವ ಕಡೆಯಲ್ಲಿ 'ಇಂಥದು ನನಗೆ ಅಗತ್ಯವಿದೆ' ಎಂದು ಬೇರೆಯವರ ಮನೆಗೆ ಹೋಗದ ಹಾಗಿರಲಿ." ಎಂದುಕೊಂಡು ಸರ್ವ ಉಪಕರಣಗಳನ್ನೂ ಕೊಟ್ಟು ಕಳುಹಿಸಿದನು.

ಒಂದೊಂದು ರಥದಲ್ಲಿಯೂ ಸರ್ವಾಲಂಕಾರಭೂಷಿತೆಯರಾದ ಮೂವರು ಮೂವರು ವರ್ಣದಾಸಿಯರನ್ನು ಇರಿಸಿ, ಅಂಥ ಐದು ನೂರು ರಥಗಳನ್ನು ಕೊಟ್ಟನು. "ಇವಳಿಗೆ ಸ್ನಾನಮಾಡಿಸುತ್ತ, ಊಟಮಾಡಿಸುತ್ತ, ಅಲಂಕಾರ ಮಾಡಿಸುತ್ತ ನೀವು ಇರತಕ್ಕದ್ದು." ಎಂದು ಆಕೆಗೆ ಒಂದೂವರೆ ಸಾವಿರ ಪರಿಚಾರಿಕೆಯರನ್ನು ಕೊಟ್ಟನು.

ಅನಂತರ ಆತನಿಗೆ ಎನ್ನಿಸಿತು: "ನನ್ನ ಮಗಳಿಗೆ ಗೋವುಗಳನ್ನು ಕೊಡುತ್ತೇನೆ." ಎಂದು.

ಆಳುಗಳಿಗೆ ಆಜ್ಞಾಪಿಸಿದನು:

"ನೀವು ಹೋಗಿರಿ. ಚಿಕ್ಕ ಕರುಹಟ್ಟಿಯ ಬಾಗಿಲನ್ನು ತೆಗೆಯಿರಿ. ತೆರೆದ ಮೇಲೆ, ಅಲ್ಲಿನ ಓಣಿಯ ಎರಡೂ ಕಡೆ, ಕಾಲು ಯೋಜನಕ್ಕೆ ಒಬ್ಬೊಬ್ಬರಂತೆ, ಮುಕ್ಕಾಲು ಯೋಜನದವರೆಗೆ, ಭೇರಿಯನ್ನು ಹಿಡಿದು ನಿಲ್ಲಿರಿ. ಹಸುಗಳು ಅಲ್ಲಿಂದ ಆಚೆಗೆ ಹೋಗಲು ಅವಕಾಶ ಕೊಡಬೇಡಿರಿ. ನೀವು ನೀವು ನಿಮ್ಮ ಸ್ಥಾನಗಳಲ್ಲಿ ನಿಂತ ಬಳಿಕ ಭೇರೀಸಂಜ್ಞೆ ಮಾಡಿರಿ."

ಆ ಆಳುಗಳು ಹಾಗೇ ಮಾಡಿದರು. ಕರುಹಟ್ಟಿಯನ್ನು ಬಿಟ್ಟು, ಕಾಲು ಯೋಜನ ದೂರ ಹೋಗಿ ಭೇರೀಸಂಜ್ಞೆ ಮಾಡಿದರು; ಮುಂದೆ, ಅರ್ಧಯೋಜನ ದೂರ ಹೋಗಿ, ಮತ್ತೇ ಭೇರೀಸಂಜ್ಞೆಮಾಡಿದರು;

ಅಲ್ಲಿಂದ ಮುಕ್ಕಾಲು ಯೋಜನದ ದೂರಕ್ಕೆ ಹೋಗಿ, ಪುನಃ ಭೇರೀ ಸಂಜ್ಞೆ ಮಾಡಿದರು. ಆಚೆ ಈಚೆ ಗೋವು ತಪ್ಪಿಸಿಕೊಳ್ಳಲು ಅವಕಾಶ ಕೊಡಲಿಲ್ಲ. ಹೀಗೆ ಮುಕ್ಕಾಲು ಯೋಜನದ ಉದ್ದಕ್ಕೂ ಗೋವುಗಳು ಹೆಗಲಿಗೆ ಹೆಗಲು ಉಜ್ಜುತ್ತ ನಿಂತುವು.

''ನನ್ನ ಮಗಳಿಗೆ ಇಷ್ಟು ಗೋವು ಸಾಕು. ಕರುಹಟ್ಟಿಯ ಬಾಗಿಲನ್ನು ಮುಚ್ಚಿಬಿಡಿ.'' ಎಂದು ಶ್ರೇಷ್ಠಿ ಆಜ್ಞೆಮಾಡಿದನು.

ಆದರೆ, ಬಾಗಿಲು ಮುಚ್ಚಿದ ಮೇಲೂ, ವಿಶಾಖೆಯ ಪುಣ್ಯದ ಫಲವಾಗಿ, ಬಲಶಾಲಿಗಳಾದ ಗೂಳಿಗಳೂ ಹಾಲುಕರೆಯುವ ಹಸುಗಳೂ ಮೇಲೆ ಹಾರಿ ಹಾರಿ ಹೊರಟುಹೋದುವು. ಅವುಗಳನ್ನು ತಡೆಯುವುದಕ್ಕೆ ಏನೇನೇ ಮಾಡಿದರೂ, ಅರುವತ್ತು ಸಾವಿರ ಬಲವಾದ ಗೂಳಿಗಳೂ ಅರುವತ್ತುಸಾವಿರ ಕರೆಯುವ ಹಸುಗಳೂ ತಪ್ಪಿಸಿಕೊಂಡು ಹೋದುವು.

ಧನಂಜಯಶ್ರೇಷ್ಠಿಯು ಇಷ್ಟೆಲ್ಲಾ ಧನವನ್ನು ತನ್ನ ಮಗಳಿಗೆ ಕೊಡುವ ಸಮಯದಲ್ಲಿ ಶ್ರೇಷ್ಠಿಯ ಹೆಂಡತಿ ಹೇಳಿದಳು :

''ನೀನು ನಿನ್ನ ಮಗಳಿಗೆ ಎಲ್ಲಾ ಉಪಕರಣಗಳನ್ನೂ ಒದಗಿಸಿರುವೆ. ಆದರೆ ಆಕೆಯನ್ನು ಅನುವರ್ತಿಸಿ ನಡೆಯುವಂಥ ದಾಸದಾಸೀ ಜನರನ್ನು ಮಾತ್ರ ಒದಗಿಸಿಲ್ಲ. ಇದಕ್ಕೆ ಏನು ಕಾರಣ?'

''ಏಕೆಂದರೆ, ನನ್ನ ಮಗಳ ವಿಷಯದಲ್ಲಿ ಸ್ನೇಹವಿರುವವರು ಯಾರು, ಸ್ನೇಹವಿಲ್ಲದವರು ಯಾರು, ಎಂಬುದನ್ನು ತಿಳಿಯಬೇಕೆಂದಿದ್ದೇನೆ. ಆಕೆಯ ಸಂಗಡ ಹೋಗಲು ಇಷ್ಟವಿಲ್ಲದಿದ್ದವರನ್ನು ಕತ್ತು ಹಿಡಿದು ಆಕೆಯ ಹಿಂದೆ ನೂಕುವುದು ನನ್ನ ಉದ್ದೇಶವಲ್ಲ. ಆಕೆ ತನ್ನ ರಥವನ್ನು ಏರಿ, ಹೊರಡಲು ಸಿದ್ಧಳಾದಾಗ, 'ಆಕೆಯೊಡನೆ ಹೋಗಲು ಬಯಸುವವರು ಹೋಗಿರಿ; ಹೋಗಲು ಇಷ್ಟವಿಲ್ಲದಿದ್ದವರು ಇಲ್ಲಿಯೇ ನಿಲ್ಲಿರಿ.' ಎಂದು ಹೇಳುತ್ತೇನೆ.''

''ನಾಳೆ ನನ್ನ ಮಗಳು ಇಲ್ಲಿಂದ ಹೊರಡುತ್ತಾಳೆ'' ಎಂದು

ಶ್ರೇಷ್ಠಿಯು ಒಳಮನೆಯಲ್ಲಿ ಕುಳಿತು ಚಿಂತಿಸಿದನು. ಮಗಳಿಗೆ ಹೇಳಿ ಕಳುಹಿಸಿ, ಸಮೀಪದಲ್ಲಿ ಕುಳ್ಳಿರಿಸಿಕೊಂಡು, ಹೇಳಿದನು :

"ಮುದ್ದುಮಗಳೆ, ಪತಿಯ ಗೃಹದಲ್ಲಿ ವಾಸಮಾಡುವವಳು ಇಂಥ ಇಂಥ ಆಚಾರಗಳನ್ನು ರಕ್ಷಿಸುವುದು ತಕ್ಕದ್ದು." ಎಂದು ಬುದ್ಧಿವಾದ ಹೇಳಿದನು.

ಅಲ್ಲಿಯೇ ಪಕ್ಕದ ಒಳಮನೆಯಲ್ಲಿ ಮಿಗಾರಶ್ರೇಷ್ಠಿ ಕುಳಿತಿದ್ದವನು ಧನಂಜಯ ಶ್ರೇಷ್ಠಿಯ ಬುದ್ಧಿವಾದವನ್ನು ಕೇಳಿಸಿಕೊಂಡನು.

ಧನಂಜಯ ಶ್ರೇಷ್ಠಿ ತನ್ನ ಮಗಳಿಗೆ ಹೇಳಿದನು:

"ಅಮ್ಮ, ಮಾವನ ಮನೆಯಲ್ಲಿ ವಾಸಮಾಡುವವಳು—

"ಒಳಗಿನ ಅಗ್ನಿಯನ್ನು ಹೊರಗೆ ಒಯ್ಯತಕ್ಕದ್ದಲ್ಲ;

"ಹೊರಗಿನ ಅಗ್ನಿಯನ್ನು ಒಳಗೆ ಹೊಗಿಸತಕ್ಕದ್ದಲ್ಲ;

"ಕೊಟ್ಟವರಿಗೆ ಮಾತ್ರ ಕೊಡತಕ್ಕದ್ದು;

"ಕೊಡದವರಿಗೆ ಕೊಡತಕ್ಕದ್ದಲ್ಲ;

"ಕೊಡುವವರಿಗೂ ಕೊಡದವರಿಗೂ ಕೊಡತಕ್ಕದ್ದು;

"ಸುಖವಾಗಿ ಕುಳ್ಳಿರತಕ್ಕದ್ದು;

"ಸುಖವಾಗಿ ಭುಂಜಿಸತಕ್ಕದ್ದು;

"ಸುಖವಾಗಿ ಮಲಗತಕ್ಕದ್ದು;

"ಅಗ್ನಿಯನ್ನು ಪರಿಚರ್ಯೆಮಾಡತಕ್ಕದ್ದು;

"ಮನೆಯೊಳಗಿನ ದೇವತೆಗಳಿಗೆ ನಮಸ್ಕರಿಸತಕ್ಕದ್ದು."

ಹೀಗೆ ಧನಂಜಯಶ್ರೇಷ್ಠಿ ತನ್ನ ಮಗಳಿಗೆ ಈ ಪ್ರಕಾರದ ಹತ್ತು ಬುದ್ಧಿಯ ಮಾತುಗಳನ್ನು ಹೇಳಿದನು.

ಮಾರನೆಯ ದಿವಸ ಶ್ರೇಣಿಕರೆಲ್ಲರನ್ನೂ ಒಟ್ಟಿಗೆ ಕರೆದು, ರಾಜನ ಸೇನೆಯ ನಡುವೆ, ಎಂಟು ಜನ ಕುಟುಂಬಿಕರನ್ನು ತನ್ನ ಮಗಳಿಗೆ ಸಾಕ್ಷಿಗಳನ್ನಾಗಿ ನೇಮಿಸಿದನು. "ನನ್ನ ಮಗಳು ಹೋಗುವ ಕಡೆಯಲ್ಲಿ ಏನಾದರೂ ದೋಷ ಆರೋಪವಾದರೆ, ನೀವು ಶೋಧಿಸತಕ್ಕದ್ದು" ಎಂದು ಅವರನ್ನು ಒಪ್ಪಿಸಿದನು.

ಅನಂತರ, ಒಂಬತ್ತು ಕೋಟಿ ಬೆಲೆ ಬಾಳುವ ಆ ಮಹಾಲತಾ ಪ್ರಸಾಧನದಿಂದ ಮಗಳನ್ನು ಅಲಂಕರಿಸಿ, ಆಕೆಯ ಸ್ನಾನಚೂರ್ಣಕ್ಕೆ ಮೌಲ್ಯವೆಂದು ಐವತ್ತು ನಾಲ್ಕು ಕೋಟಿ ಧನವನ್ನು ಕೊಟ್ಟು, ರಥವನ್ನು ಹತ್ತಿಸಿದನು. ಸಾಕೇತದ ಸುತ್ತ ಅನುರಾಧಪುರದವರೆಗೂ ತನಗೆ ಕಪ್ಪ ಕೊಡತಕ್ಕಂಥ ಹದಿನಾಲ್ಕು ಗ್ರಾಮಗಳಲ್ಲಿ ತಿರುಗಿ, "ನನ್ನ ಮಗಳ ಸಂಗಡ ಹೋಗಲು ಬಯಸುವವರು ಹೋಗಲಿ." ಎಂದು ಡಂಗುರ ಹಾಕಿಸಿದನು.

ಆ ಹದಿನಾಲ್ಕು ಗ್ರಾಮದವರೂ ಆ ಶಬ್ದವನ್ನು ಕೇಳಿ, "ನಮ್ಮ ಒಡತಿ ಹೊರಟುಹೋಗುವಾಗ ನಮಗೆ ಇಲ್ಲಿ ಏನು ಕೆಲಸ?" ಎಂದು, ಏನೂ ಬಿಡದಂತೆ ಎಲ್ಲವನ್ನೂ ಕಟ್ಟಿಕೊಂಡು ಹೊರಟರು.

ಧನಂಜಯಶ್ರೇಷ್ಠಿಯು ರಾಜನಿಗೂ ಮಿಗಾರಶ್ರೇಷ್ಠಿಗೂ ಸತ್ಕಾರ ಮಾಡಿ, ಅವರೊಡನೆ ಸ್ವಲ್ಪದೂರ ಹೋಗಿ, ಮಗಳನ್ನು ಕಳುಹಿಸಿ ಕೊಟ್ಟನು.

ಮಿಗಾರಶ್ರೇಷ್ಠಿ ಎಲ್ಲರಿಗೂ ಹಿಂದೆ ರಥದಲ್ಲಿ ಕುಳಿತು ಹೋಗುತ್ತಾ, ಹಿಂದೆ ಬರುವ ಜನಸಮುದಾಯವನ್ನು ಕಂಡು, "ಇವರು ಯಾರು?" ಎಂದು ಪ್ರಶ್ನಿಸಿದನು.

"ನಿನ್ನ ಸೊಸೆ ಹೇಳಿದಂತೆ ಕೆಲಸಮಾಡುವ ದಾಸದಾಸಿಯರು."

"ಇಷ್ಟು ಜನರನ್ನು ಪೋಷಿಸುವವರು ಯಾರು? ಕಟ್ಟಿಗೆಯಿಂದ ಹೊಡೆದು, ಹಿಂದಕ್ಕೆ ಓಡಿಸಿರಿ."

ವಿಶಾಖಾ ಹೇಳಿದಳು: "ಬಿಡಿರಿ. ತಡೆಯಬೇಡಿ. ಸೈನ್ಯಕ್ಕೆ ಸೈನ್ಯವೇ ಊಟ ಕೊಡುತ್ತದೆ."

ಅದಕ್ಕೆ ಶ್ರೇಷ್ಠಿ, "ಅಮ್ಮ, ನಮಗೆ ಇಷ್ಟು ಜನರ ಅಗತ್ಯವಿಲ್ಲ. ಇವರನ್ನು ಪೋಷಿಸುವವರು ಯಾರು?" ಎಂದು ಮಣ್ಣಿನ ಹೆಂಟೆ, ದೊಣ್ಣೆ ಮೊದಲಾದವುಗಳಿಂದ ಹೊಡೆಸಿ, ಅವರನ್ನು ಓಡಿಸಿದನು. ಎಷ್ಟು ಓಡಿಸಿದರೂ ಹೋಗದೆ ನಿಂತವರನ್ನು "ನಮಗೆ ಇಷ್ಟು ಸಾಕು." ಎಂದು ಜೊತೆಗೆ ಕರೆದುಕೊಂಡು, ಮುಂದೆ ಹೋದನು.

ಆಗ ವಿಶಾಖಾ ಶ್ರಾವಸ್ತಿಯ ನಗರದ್ವಾರವನ್ನು ಸಮೀಪಿಸುತ್ತಾ ಚಿಂತಿಸಿದಳು: "ಮುಚ್ಚಿದ ಗಾಡಿಯಲ್ಲಿ ಕುಳಿತು ನಗರವನ್ನು ಪ್ರವೇಶಿಸಲೊ? ಇಲ್ಲವೆ, ರಥದಲ್ಲಿ ನಿಂತು ಹೋಗಲೊ?"

ಆಗ ಆಕೆ "ಮುಚ್ಚಿದ ಯಾನದಲ್ಲಿ ಕುಳಿತು ಪ್ರವೇಶಿಸಿದರೆ, ನನ್ನ ಮಹಾಲತಾಪ್ರಸಾಧನದ ವಿಶೇಷವು ತಿಳಿದುಬರುವುದಿಲ್ಲ." ಎಂದುಕೊಂಡು, ಸಕಲ ನಗರದವರೂ ತನ್ನನ್ನು ಕಾಣುವ ಹಾಗೆ ರಥದಲ್ಲಿ ನಿಂತು ನಗರವನ್ನು ಪ್ರವೇಶಿಸಿದಳು.

ಶ್ರಾವಸ್ತಿಯ ನಿವಾಸಿಗಳು ವಿಶಾಖೆಯ ಸಂಪತ್ತಿಯನ್ನು ಕಂಡು, "ಈಕೆಯೇ ವಿಶಾಖಾ ಎಂಬವಳು. ಈಕೆಯ ಸಂಪತ್ತಿ ಇಂತಹದು. ಇದು ಈಕೆಗೆ ಒಪ್ಪುತ್ತದೆ." ಎಂದು ಮಾತನಾಡಿಕೊಂಡರು.

ಹೀಗೆ ವಿಶಾಖಾ ಮಹಾಸಂಪತ್ತಿಯಿಂದ ಶ್ರೇಷ್ಠಿಯ ಮನೆಯನ್ನು ಪ್ರವೇಶಿಸಿದಳು.

ಆಕೆ ಶ್ರಾವಸ್ತಿಗೆ ಹೋದ ದಿವಸವೇ ನಗರದ ಸಕಲ ಜನರೂ "ನಮಗೆ ಧನಂಜಯ ಶ್ರೇಷ್ಠಿಯು ತನ್ನ ನಗರದಲ್ಲಿ ಮಹಾ ಸತ್ಕಾರವನ್ನು ಮಾಡಿದನು." ಎಂದು ಯಥಾಶಕ್ತಿಯಾಗಿ ಯಥಾಬಲದಿಂದ ಪಾರಿತೋಷಕಗಳನ್ನು ವಿಶಾಖೆಗೆ ಕಳುಹಿಸಿದರು. ವಿಶಾಖೆಯಾದರೋ ತನಗೆ ಬೇರೆ ಬೇರೆ ಮನೆಯವರು ಕಳುಹಿಸಿದ ಪಾರಿತೋಷಕಗಳನ್ನೆಲ್ಲಾ ಬೇರೆ ಬೇರೆ ಮನೆಯವರಿಗೇ ಕಳುಹಿಸಿಕೊಟ್ಟಳು. 'ಇದನ್ನು ನನ್ನ ತಾಯಿಗೆ ಕೊಡಿರಿ', 'ಇದನ್ನು ತಂದೆಗೆ ಕೊಡಿರಿ', 'ಇದನ್ನು ಅಣ್ಣನಿಗೆ', 'ಇದನ್ನು ತಂಗಿಗೆ' ಎಂದು ಅವರವರ ವಯಸ್ಸಿಗೆ ಅನುರೂಪವಾದ ಪ್ರಿಯವಚನವನ್ನು ಹೇಳಿ, ಪಾರಿತೋಷಕಗಳನ್ನು ಕಳುಹಿಸಿದಳು. ಹೀಗೆ, ನಗರವಾಸಿಗಳು ಎಲ್ಲರನ್ನೂ ತನ್ನ ಬಂಧುಗಳಂತೆ ಮಾಡಿಕೊಂಡಳು.

ಅದೇ ರಾತ್ರಿ, ಸರಿಹೊತ್ತಿನಲ್ಲಿ, ವಿಶಾಖೆಗೆ ಸೇರಿದ ಜಾತ್ಯಶ್ವವೊಂದಕ್ಕೆ ಪ್ರಸವವಾಯಿತು. ಕೂಡಲೆ ವಿಶಾಖಾ ತನ್ನ ದಾಸ ದಾಸಿಯರೊಡನೆ ದೊಣ್ಣೆಗಳನ್ನೂ ದೀಪಗಳನ್ನೂ ತೆಗೆಯಿಸಿಕೊಂಡು ಅಲ್ಲಿಗೆ ಹೋಗಿ, ಆ ಹೆಣ್ಣುಕುದುರೆಗೆ ಬಿಸಿನೀರಿನಿಂದ ಸ್ನಾನಮಾಡಿಸಿ, ಅದರ ಮೈಗೆಲ್ಲ ತೈಲಹಚ್ಚಿ, ಅನಂತರ ತನ್ನ ವಾಸಸ್ಥಾನಕ್ಕೆ ಹಿಂದಿರುಗಿದಳು.

— ೫ —

ಮಿಗಾರಶ್ರೇಷ್ಠಿ ತನ್ನ ಮಗನ ಮದುವೆಯ ಮಂಗಲವನ್ನು ಮಾಡುವಾಗ, ಬುದ್ಧಗುರು ಅನತಿದೂರದ ವಿಹಾರದಲ್ಲಿ ವಾಸ ಮಾಡು ತ್ತಿದ್ದರೂ, ಆತನನ್ನು ಮನಸ್ಸಿಗೂ ತಂದುಕೊಳ್ಳಲಿಲ್ಲ. ಆದರೆ ಅನ್ಯಸಂನ್ಯಾಸಿಗಳಲ್ಲಿ ಅನೇಕ ಕಾಲದಿಂದ ಪ್ರೀತಿಯನ್ನು ಇರಿಸಿದ್ದನಾದ ಕಾರಣ, "ನನ್ನ ಆರ್ಯರಿಗೆ ನಾನು ಸತ್ಕಾರಮಾಡುತ್ತೇನೆ." ಎಂದು ಕೊಂಡು, ಒಂದು ದಿವಸ ನೂರಾರು ಹೊಸ ಪಾತ್ರೆಗಳಲ್ಲಿ ಸೊಗಸಾದ ಪಾಯಸವನ್ನು ಪಕ್ವಮಾಡಿಸಿ, ಐದುನೂರು ಅನ್ಯಸಂನ್ಯಾಸಿಗಳನ್ನು ಆಮಂತ್ರಿಸಿ, ತನ್ನ ಮನೆಗೆ ಬರಮಾಡಿಕೊಂಡನು. "ಮನೆಯ ಸೊಸೆ ಬರಲಿ, ಅರ್ಹಂತರಿಗೆ ವಂದಿಸಲಿ."ಎಂದು ವಿಶಾಖೆಗೆ ವಾರ್ತೆ ಕಳುಹಿಸಿದನು.

ವಿಶಾಖಾ, ಸ್ರೋತಾಪತ್ತಿ ಫಲವನ್ನು ಪಡೆದ ಆರ್ಯಶ್ರಾವಿಕೆಯು, "ಅರ್ಹಂತ" ಎಂಬ ಮಾತನ್ನು ಕೇಳಿ, ಸಂತೋಷದಿಂದ ಸಂಭ್ರಮ ದಿಂದ, ಅವರು ಊಟಮಾಡುತ್ತಿದ್ದ ಬಳಿಗೆ ಬಂದು, ಅವರನ್ನು ಕಂಡಳು. "ನಾಚಿಕೆಯಿಲ್ಲದ, ಹೇಸಿಗೆಯಿಲ್ಲದ ಇವರನ್ನು ಅರ್ಹಂತರೆನಲಾಗದು. ನನ್ನ ಮಾವ ನನ್ನನ್ನು ಏಕೆ ಬರಹೇಳಿದರು?" ಎಂದು ಶ್ರೇಷ್ಠಿಯನ್ನು ಆಕ್ಷೇಪಿಸಿ, ತನ್ನ ವಾಸಸ್ಥಾನಕ್ಕೆ ತಾನು ಹೋದಳು.

ಅನ್ಯ ಸಂನ್ಯಾಸಿಗಳು ಅವಳನ್ನು ಕಂಡು, ಎಲ್ಲರೂ ಒಂದೇ ಏಟಿಗೆ ಶ್ರೇಷ್ಠಿಯನ್ನು ಆಕ್ಷೇಪಿಸಿದರು : "ಏನಯ್ಯಾ, ನಿನಗೆ ಬೇರೆ ಯಾರೂ ದೊರಕಲಿಲ್ಲವೆ? ಶ್ರಮಣ ಗೌತಮನ ಶ್ರಾವಿಕೆಯಾದ ಈ ಮಹಾಕಾಳಿ ಯನ್ನು ಮನೆಗೆ ಸೇರಿಸಿಕೊಂಡಿರುವೆಯಲ್ಲ! ಬೇಗನೆ ಈಕೆಯನ್ನು ಈ ಮನೆಯಿಂದ ಹೊರಗೆಹಾಕು!"

ಅದಕ್ಕೆ ಮಿಗಾರನು "ಇವರ ಮಾತು ಇಷ್ಟರಿಂದಲೇ ಇವಳನ್ನು ಮನೆಯಿಂದ ಹೊರಡೂಡುವುದು ಸಾಧ್ಯವಿಲ್ಲ. ಈಕೆ ಮಹಾಕುಲದಿಂದ ಬಂದ ಮಗಳು." ಎಂದು ಚಿಂತಿಸಿ, "ಆರ್ಯರೆ, ಚಿಕ್ಕವಯಸ್ಸಿನ ಹೆಣ್ಣು ತಿಳಿದೋ ತಿಳಿಯದೆಯೋ ಏನಾದರೂ ಮಾಡಿದರೆ, ನಾವು ಸುಮ್ಮನಿರು ವುದು ವಾಸಿ." ಎಂದು ಹೇಳಿ, ಅವರನ್ನು ಕಳುಹಿಸಿಕೊಟ್ಟನು.

ಅವರನ್ನು ಕಳುಹಿಸಿಯಾದ ಬಳಿಕ, ಮಿಗಾರಶ್ರೇಷ್ಠಿ ಒಂದು ಮಹಾರ್ಹವಾದ ಆಸನದಲ್ಲಿ ಕುಳಿತು, ಚಿನ್ನದ ತಟ್ಟೆಯಲ್ಲಿ ನೀರು ಕಡಿಮೆ ಯಾದ ಸಿಹಿ ಪಾಯಸವನ್ನು ಭುಂಜಿಸುತ್ತಿದ್ದನು.

ಆ ಹೊತ್ತಿಗೆ ಸರಿಯಾಗಿ ಸ್ಥವಿರನೊಬ್ಬನು ಭಿಕ್ಷೆಗೋಸ್ಕರ ಆ ಮನೆ ಯನ್ನು ಹೊಕ್ಕನು. ವಿಶಾಖಾ, ಆಗ ಮಾವನಿಗೆ ಬೀಸಣಿಗೆ ಬೀಸುತ್ತಿ ದ್ದವಳು, ಆ ಸ್ಥವಿರನನ್ನು ಕಂಡು, "ಮಾವನಿಗೆ ತಿಳಿಸುವುದು ಅಯುಕ್ತ." ಎಂದುಕೊಂಡು, ಸ್ಥವಿರನು ಕಣ್ಣಿಗೆ ಗೋಚರವಾಗುವಂತೆ ತಾನು ಒಂದು ಪಕ್ಕಕ್ಕೆ ಸರಿದು ನಿಂತಳು. ಆದರೂ, ಬುದ್ಧಿಯಿಲ್ಲದ ಆ ಶ್ರೇಷ್ಠಿ ಸ್ಥವಿರ ನನ್ನು ಕಂಡರೂ ಕಾಣಲಿಲ್ಲವೆಂಬಂತೆ ಮುಖ ಕೆಳಗೆಮಾಡಿಕೊಂಡು, ಊಟಮಾಡುತ್ತಿದ್ದನು.

ವಿಶಾಖಾ "ನನ್ನ ಮಾವನು ಸ್ಥವಿರನನ್ನು ಕಂಡರೂ ಏನೂ ಸಂಜ್ಞೆ ಯನ್ನು ಮಾಡುವುದಿಲ್ಲ." ಎಂದು ತಿಳಿದು, "ಹೋಗಿಬನ್ನಿ, ಸ್ವಾಮಿ. ನಮ್ಮ ಮಾವನವರು ಹಳೆಯ ತಂಗಳನ್ನು ತಿನ್ನುತ್ತಿದ್ದಾರೆ." ಎಂದಳು.

ಆಗ, ಅನ್ಯ ಸಂನ್ಯಾಸಿಗಳು ಹೇಳಿದಾಗ ಸುಮ್ಮನೆ ಇದ್ದ ಶ್ರೇಷ್ಠಿಯು ಈಗ 'ಹಳೆಯ ತಂಗಳನ್ನು ತಿನ್ನುತ್ತಾನೆ' ಎಂದು ಹೇಳಿದ ಕ್ಷಣವೇ ತಟ್ಟೆಯಿಂದ ಕೈ ತೆಗೆದು, "ಈ ಪಾಯಸವನ್ನು ಇಲ್ಲಿಂದ ತೆಗೆಯಿರಿ! ಇವಳನ್ನು ಈ ಮನೆಯಿಂದ ಹೊರಗೆ ದೂಡಿರಿ! ಇಂಥ ಮಂಗಲ ಕಾಲ ದಲ್ಲಿ ನಾನು ಅಶುಚಿಯನ್ನು ತಿನ್ನುವೆನೆಂದು ಹೇಳುವಳಲ್ಲ!" ಎಂದನು.

ಆ ಮನೆಯಲ್ಲಿ ಇದ್ದವರೆಲ್ಲ ವಿಶಾಖೆಯ ಸಂಗಡ ಬಂದ ದಾಸರೇ, ಸೇವಕರೇ. ಆಕೆಯ ಕೈಕಾಲುಗಳನ್ನು ಹಿಡಿದು ದೂಡುವವರು ಯಾರು? ಬಾಯಿಮಾತಿನಿಂದ ಹೇಳಲು ಕೂಡ ಯಾರೂ ಸಮರ್ಥರಾಗಲಿಲ್ಲ.

ವಿಶಾಖಾ ತನ್ನ ಮಾವನ ಮಾತನ್ನು ಕೇಳಿ ಹೇಳಿದಳು: "ಅಯ್ಯಾ, ಇದು ಇಷ್ಟೇ ಕಾರಣದಿಂದ ನನ್ನನ್ನು ಹೊರದೂಡಬೇಕಾದರೆ, ನಾನೇನೂ ಯಾವುದೋ ಸ್ನಾನಘಟ್ಟದಿಂದ ನಿಮ್ಮ ಮನೆಗೆ ತರಲ್ಪಟ್ಟ ಕುಂಭದಾಸಿ ಯಲ್ಲ. ತಾಯಿ ತಂದೆ ಇರತಕ್ಕಂಥ ಹೆಣ್ಣುಮಕ್ಕಳು ಇಷ್ಟಕ್ಕೆಲ್ಲ ಮನೆ ಬಿಟ್ಟು ಹೋಗುವಂತಿಲ್ಲ. ಇದೇ ಕಾರಣದಿಂದಲೇ ನಮ್ಮ ತಂದೆ, ನಾನು

ಹೊರಟುಬರುವ ಸಮಯದಲ್ಲಿ, ಎಂಟು ಮಂದಿ ಕುಟುಂಬಿಕರನ್ನು ಕರಿ ಕಳುಹಿ, 'ನನ್ನ ಮಗಳ ಮೇಲೆ ಏನಾದರೂ ದೋಷಬಂದರೆ, ನೀವು ಅದನ್ನು ಶೋಧಿಸಿರಿ.' ಎಂದು ಹೇಳಿ, ನನ್ನನ್ನು ಅವರ ಕೈಯಲ್ಲಿ ಇರಿಸಿದನು. ಅವರಿಗೆ ಹೇಳಿ ಕಳುಹಿಸಿ. ನನ್ನ ದೋಷವನ್ನು ಅವರು ಶೋಧನೆ ಮಾಡಲಿ."

ಶ್ರೇಷ್ಠಿ "ಈಕೆ ಒಳ್ಳೆಯದನ್ನೇ ಹೇಳುತ್ತಾಳೆ." ಎಂದು ಆ ಎಂಟು ಕುಟುಂಬಿಕರಿಗೆ ಹೇಳಿ ಕಳುಹಿಸಿ, "ಈ ಹುಡುಗಿ, ಮಂಗಲ ಕಾಲದಲ್ಲಿ ಕುಳಿತುಕೊಂಡು ಚಿನ್ನದ ತಟ್ಟೆಯಲ್ಲಿ ನೀರು ಕಡಿಮೆಯಾದ ಸಿಹಿ ಪಾಯಸವನ್ನು ತಿನ್ನುತ್ತಿದ್ದ ನನ್ನನ್ನು 'ನೀನು ಅಶುಚಿ ತಿನ್ನುವವನು' ಎಂದು ಹೇಳಿದ್ದಾಳೆ. ಈ ದೋಷವನ್ನು ಇವಳಲ್ಲಿ ಆರೋಪಿಸಿ, ಇವಳನ್ನು ಇಲ್ಲಿಂದ ಹೊರಗೆ ದೂಡಿರಿ." ಎಂದನು.

"ಇದು ಹೌದೇ, ಅಮ್ಮಾ?"

"ನಾನು ಹಾಗೆ ಹೇಳಲಿಲ್ಲ. ಒಬ್ಬಾನೊಬ್ಬ ಸ್ಥವಿರನು ಭಿಕ್ಷೆಗಾಗಿ ಮನೆಯ ಬಾಗಿಲಲ್ಲಿ ಬಂದು ನಿಂತನು. ಮಾವನವರು ನೀರು ಕಡಮೆಯಾದ ಸಿಹಿ ಪಾಯಸವನ್ನು ಊಟಮಾಡುತ್ತಾ ಆತನನ್ನು ಲಕ್ಷಿಸಲೇ ಇಲ್ಲ. ಆಗ ನಾನು 'ಮಾವನವರು ಈಗ ಏನೂ ಪುಣ್ಯವನ್ನು ಮಾಡಿಕೊಳ್ಳುತ್ತಿಲ್ಲ. ಹಳೆಯ ಪುಣ್ಯವನ್ನು ಅಷ್ಟೇ ತಿನ್ನುತ್ತಿದ್ದಾರೆ.' ಎಂದುಕೊಂಡು, 'ಹೋಗಿಬನ್ನಿ, ಸ್ವಾಮಿ. ನಮ್ಮ ಮಾವನವರು ಹಳೆಯ ತಂಗಳನ್ನು ತಿನ್ನುತ್ತಿದ್ದಾರೆ.' ಎಂದು ಹೇಳಿದೆ. ಇದರಲ್ಲಿ ನನ್ನದು ಏನು ದೋಷ?" ಎಂದಳು, ವಿಶಾಖಾ.

"ಏನೂ ಇಲ್ಲ. ನಮ್ಮ ಮಗಳು ಯುಕ್ತವಾದದ್ದನ್ನೇ ಹೇಳಿದಳು. ಇದಕ್ಕೆ ಏಕೆ ಕೋಪ?"

"ಅಯ್ಯಾ, ಇದು ಏನೂ ದೋಷವಿಲ್ಲವೆಂದು ಇಟ್ಟುಕೊಳ್ಳೋಣ. ಆದರೆ, ಒಂದು ದಿವಸ ಈಕೆ ಮಧ್ಯರಾತ್ರಿಯಲ್ಲಿ ದಾಸೀ ದಾಸರ ಪರಿವಾರದೊಡನೆ ಮನೆಯ ಹಿಂದುಗಡೆಗೆ ಹೋದಳು. ಅದು ಏಕೆ?"

"ಇದು ಹೌದೇ, ಅಮ್ಮಾ?"

"ಅಯ್ಯಾ, ನಾನು ಬೇರೆ ಕಾರಣದಿಂದ ಹೋದವಳಲ್ಲ. ಈ ಮನೆಯಲ್ಲಿ ಒಂದು ಜಾತ್ಯಶ್ವವು ಪ್ರಸವಿಸುವಾಗ, 'ಏನೂ ಮಾಡದೆ ಸುಮ್ಮನೆ ಕುಳಿತಿರುವುದು ನನಗೆ ಯುಕ್ತವಲ್ಲ' ಎಂದು ದಂಡಗಳನ್ನೂ ದೀಪಗಳನ್ನೂ ತೆಗೆಸಿಕೊಂಡು ದಾಸದಾಸಿಯರೊಡನೆ ಹೋಗಿ, ಆ ಹೆಣ್ಣುಕುದುರೆಗೆ ಪ್ರಸವಕಾಲದಲ್ಲಿ ಮಾಡಬೇಕಾದ ಪರಿಹಾರಗಳನ್ನು ಮಾಡಿಬಂದೆ."

"ಅಯ್ಯಾ, ನಮ್ಮ ಮಗಳು ನಿಮ್ಮ ಮನೆಯಲ್ಲಿ ದಾಸಿಯರು ಕೂಡ ಮಾಡದ ಕಾರ್ಯವನ್ನು ಮಾಡಿದ್ದಾಳೆ. ಇದರಲ್ಲಿ ನಿಮಗೆ ಏನು ದೋಷ ಕಾಣುತ್ತದೆ?"

"ಅಯ್ಯಾ, ಇದರಲ್ಲಿಯೂ ದೋಷವಿಲ್ಲವೆಂದೇ ಆಗಲಿ. ಈಕೆಯ ತಂದೆ ಈಕೆ ಇಲ್ಲಿಗೆ ಹೊರಟುಬರುವಾಗ ಅದೇನೋ ಗೂಢವಾದ ರಹಸ್ಯವನ್ನು ಮುಚ್ಚಿ, ಹತ್ತು ಬುದ್ಧಿಯ ಮಾತನ್ನು ಹೇಳಿ ಕಳಿಸಿದನು. ಅವುಗಳ ಅರ್ಥ ನನಗೆ ತಿಳಿಯದು. ನನಗೆ ಅದರ ಅರ್ಥವನ್ನು ತಿಳಿಸಲಿ. ಇವಳ ತಂದೆಯೇನೋ 'ಒಳಗಿನ ಅಗ್ನಿಯನ್ನು ಹೊರಗೆ ಒಯ್ಯತಕ್ಕದ್ದಲ್ಲ' ಎಂದು ಹೇಳಿದನು; ಆದರೆ, ಅಕ್ಕಪಕ್ಕದ ಮನೆಯವರಿಗೆ ನಾವು ಅಗ್ನಿಯನ್ನು ಕೊಡದೆ, ಅನ್ಯೋನ್ಯವಾಗಿ ವಾಸಮಾಡುವುದು ಹೇಗೆ?"

"ಇದು ಹೌದೆ, ಅಮ್ಮಾ?"

"ಅಯ್ಯಾ, ನಮ್ಮ ತಂದೆ ಈ ಅರ್ಥ ಇಟ್ಟು ಹೇಳಲಿಲ್ಲ; ಈ ಅರ್ಥ ಇಟ್ಟು ಹೇಳಿದರು: ಏನೆಂದರೆ, 'ಅಮ್ಮಾ, ನಿನ್ನ ಅತ್ತೆ ಮಾವಂದಿರಲ್ಲಾಗಲಿ ಗಂಡನಲ್ಲಾಗಲಿ ಏನಾದರೂ ಅವಗುಣ ಕಂಡುಬಂದರೂ, ಅವರಿವರ ಮನೆಗೆ ಹೋದ ಸಂದರ್ಭದಲ್ಲಿ, ಅದನ್ನು ಕುರಿತು ಆಡಬೇಡ ಈ ರೀತಿಯಾದ ಅಗ್ನಿಗೆ ಸಮಾನವಾದ ಅಗ್ನಿ ಇನ್ನಿಲ್ಲ."

"ಅಯ್ಯಾ, ಅದು ಹಾಗೆಂದೇ ಆಗಲಿ. ಮತ್ತೆ, ಈಕೆಯ ತಂದೆ 'ಹೊರಗಿನ ಅಗ್ನಿಯನ್ನು ಒಳಗೆ ಹೊಗಿಸುವುದು ಬೇಡ' ಎಂದನು. ಆದರೆ, ಮನೆಯೊಳಗಿನ ಅಗ್ನಿ ಆರಿಹೋದರೆ, ಅಗ್ನಿಯನ್ನು ತರದೆ, ಬದುಕುವುದು ಹೇಗೆ ಸಾಧ್ಯ?"

"ಇದು ಹೌದೇ, ಅಮ್ಮಾ?"

"ಅಯ್ಯಾ, ನನ್ನ ತಂದೆ ಈ ಅರ್ಥವಿಟ್ಟು ಹೇಳಲಿಲ್ಲ; ಈ ಅರ್ಥವಿ

ರಿಸಿ ಹೇಳಿದರು: ಏನೆಂದರೆ, 'ಅಕ್ಕಪಕ್ಕದ ಮನೆಯವರು ನಿನ್ನ ಅತ್ತೆ ಮಾವಂದಿರನ್ನೋ ಗಂಡನನ್ನೋ ಕುರಿತು ಏನಾದರೂ ಆಡಿದರೆ, ಅದನ್ನು ಮನೆಗೆ ತಂದು, ಇಂಥಿಂಥವರ ಮನೆಯಲ್ಲಿ ಹೀಗೆ ಹೀಗೆ ಹೇಳಿದರು ಎಂದು ಹೇಳಬೇಡ. ಈ ರೀತಿಯಾದ ಅಗ್ನಿಗೆ ಸಮಾನವಾದ ಅಗ್ನಿ ಬೇರೆಯಿಲ್ಲ.' "

ಆಯಿತು, ಇದರಲ್ಲಿಯೂ ಆಕೆ ನಿರ್ದೋಷಿ ಎನಿಸಿದಳು. ಉಳಿದಿದ್ದ ರಲ್ಲೂ ಹಾಗೇ ಆಯಿತು. ಉಳಿದವಕ್ಕೆ ಅರ್ಥ ಹೀಗೆ, ಎಂದು ಹೇಳಿದಳು:

'ಕೊಟ್ಟವರಿಗೆ ಮಾತ್ರ ಕೊಡತಕ್ಕದ್ದು'—ಎಂದರೆ, ಯಾವುದಾ ದರೂ ಉಪಕರಣವನ್ನು ಬೇಡಿದಾಗ ಯಾರು ಕೊಡುವರೋ, ಅವರಿಗೆ ಕೇಳಿದಾಗ ಕೇಳಿದ್ದನ್ನು ಕೊಡತಕ್ಕದ್ದು.—ಎಂದು ಅರ್ಥ.

'ಕೊಡದವರಿಗೆ ಕೊಡತಕ್ಕದ್ದಲ್ಲ'—ಎಂದರೆ, ಬೇಡಿ ತೆಗೆದು ಕೊಂಡು ಹೋದ ವಸ್ತುಗಳನ್ನು ಹಿಂದಿರುಗಿಸಿ ಕೊಡದವರಿಗೆ ಮತ್ತೆ ಏನನ್ನೂ ಕೊಡತಕ್ಕದಲ್ಲ.—ಎಂದು ಅರ್ಥ.

'ಕೊಡುವವರಿಗೂ ಕೊಡದವರಿಗೂ ಕೊಡತಕ್ಕದ್ದು'—ಎಂದರೆ, ದರಿದ್ರರಾದ ಜ್ಞಾತಿಗಳಿಗೂ ಮಿತ್ರರಿಗೂ ಆಗತ್ಯ ಒದಗಿದಾಗ, ಅವರು ಕೊಡಲಿ, ಕೊಡದೆ ಇರಲಿ, ಅವರಿಗೆ ಕೊಡತಕ್ಕದ್ದು.—ಎಂದು ಅರ್ಥ.

'ಸುಖವಾಗಿ ಕುಳ್ಳಿರತಕ್ಕದ್ದು'—ಎಂದರೆ, ಅತ್ತೆ ಮಾವಂದಿರಾಗಲಿ ಪತಿಯಾಗಲಿ ಬಂದರೆ, ಎದ್ದು ನಿಲ್ಲುವುದು ತಕ್ಕುದೇ ಹೊರತು, ಕುಳ್ಳಿರ ತಕ್ಕದ್ದಲ್ಲ.—ಎಂದು ಅರ್ಥ.

'ಸುಖವಾಗಿ ಊಟಮಾಡತಕ್ಕದ್ದು'—ಎಂದರೆ, ಅತ್ತೆಮಾವಂದಿ ರಿಗೂ ಪತಿಗೂ ಊಟ ಆಗುವ ಮೊದಲು ತಾನು ಊಟಮಾಡತಕ್ಕದ್ದಲ್ಲ. ಅವರಿಗೆ ಮೊದಲು ಬಡಿಸಿ, ಅವರಿಗೆ ಬೇಕಾದದ್ದೆಲ್ಲ ಆಯಿತೆಂದ ಮೇಲೆ ಮಾತ್ರವೇ ತಾನು ಊಟಮಾಡತಕ್ಕದ್ದು.—ಎಂದು ಅರ್ಥ.

'ಸುಖವಾಗಿ ನಿದ್ರೆಮಾಡತಕ್ಕದ್ದು'—ಎಂದರೆ, ತನ್ನ ಅತ್ತೆಮಾ ವಂದಿರೂ, ಪತಿಯೂ ಮಲಗುವ ಮೊದಲು ತಾನು ಮಲಗತಕ್ಕದ್ದಲ್ಲ. ಅವರಿಗೆ ಆಗಬೇಕಾದ ಸೇವೆಗಳನ್ನೆಲ್ಲ ಆಗಮಾಡಿ, ಅನಂತರವೇ ತಾನು ಹಾಸಿಗೆಯನ್ನು ಏರತಕ್ಕದ್ದು.—ಎಂದು ಅರ್ಥ.

'ಅಗ್ನಿಯನ್ನು ಪರಿಚರ್ಯೆಮಾಡತಕ್ಕದ್ದು'—ಎಂದರೆ, ತನ್ನ ಅತ್ತೆ ಮಾವಂದಿರನ್ನೂ ಪತಿಯನ್ನೂ ಒಂದು ಅಗ್ನಿಸ್ಕಂಧದಂತೆಯೋ ನಾಗರಾಜ ನಂತೆಯೋ ಭಯಭಕ್ತಿಗಳಿಂದ ಕಂಡು, ಸೇವಿಸತಕ್ಕದ್ದು.—ಎಂದು ಅರ್ಥ.

'ಮನೆಯೊಳಗಿನ ದೇವತೆಗಳಿಗೆ ನಮಸ್ಕರಿಸತಕ್ಕದ್ದು'—ಎಂದರೆ, ತನ್ನ ಅತ್ತೆಮಾವಂದಿರನ್ನೂ ಪತಿಯನ್ನೂ ಸಾಕ್ಷಾತ್ ದೇವತೆಗಳಂತೆ ಭಾವಿಸತಕ್ಕದ್ದು.—ಎಂದು ಅರ್ಥ.

ಹೀಗೆ, ಆ ಹತ್ತು ಬುದ್ಧಿಯ ಮಾತುಗಳಿಗೆ ಇದು ಅರ್ಥ ಎಂದು ಹೇಳಿದ ಮೇಲೆ, ಮಿಗಾರಶ್ರೇಷ್ಠಿ ಏನೂ ಉತ್ತರ ಹೇಳಲಾರದೆ, ತಲೆ ತಗ್ಗಿಸಿಕೊಂಡು ಕುಳಿತನು.

ಆಗ ಆ ಕುಟುಂಬಿಕರು ಕೇಳಿದರು: "ಏನು ಶ್ರೇಷ್ಠಿ, ನಮ್ಮ ಮಗಳಲ್ಲಿ ಇನ್ನು ಏನಾದರೂ ದೋಷ ಉಂಟೊ?"

"ಇಲ್ಲ, ಅಯ್ಯಾ."

"ಹಾಗಾದರೆ, ದೋಷವಿಲ್ಲದವಳನ್ನು ಅಕಾರಣವಾಗಿ ಏಕೆ ಮನೆ ಯಿಂದ ಹೊರಗೆ ದೂಡಿಸುತ್ತೀಯೆ?"

ಹೀಗೆನ್ನಲು ವಿಶಾಖಾ ಹೇಳಿದಳು:

"ಅಯ್ಯಾ, ಇದಕ್ಕೆ ಮೊದಲು, ನನ್ನ ಮಾವನವರ ಮಾತಿನಂತೆ ನಾನು ಹೊರಡುವುದು ಯುಕ್ತವಾಗಿರಲಿಲ್ಲ. ಏಕೆಂದರೆ, ನನ್ನ ತಂದೆ ನಾನು ಹೊರಡುವಾಗ ನನ್ನ ದೋಷವನ್ನು ಶೋಧನೆ ಮಾಡುವುದಕ್ಕಾಗಿ ನನ್ನನ್ನು ನಿಮ್ಮ ಕೈಯಲ್ಲಿಟ್ಟನು. ನನ್ನಲ್ಲಿ ದೋಷವಿಲ್ಲವೆಂಬುದನ್ನು ಈಗ ನೀವು ತಿಳಿದಿರುವಿರಿ. ಇನ್ನು ನಾನು ಇಲ್ಲಿಂದ ಹೊರಡುವುದು ಯುಕ್ತ."

ಒಡನೆ ಹೀಗೆಂದು ಆಜ್ಞೆಮಾಡಿದಳು:

"ನನ್ನ ದಾಸದಾಸಿಯರೂ ರಥ ಮೊದಲಾದ ಇತರ ವಾಹನಗಳೂ ಸಜ್ಜಾಗಲಿ."

ಆಗ ಶ್ರೇಷ್ಠಿ ಆ ಕುಟುಂಬಿಕರನ್ನು ಹಿಡಿದುಕೊಂಡು, "ಅಮ್ಮ, ನಾನು ತಿಳಿಯದೆ ಆಡಿದೆ. ನೀನು ನನ್ನನ್ನು ಕ್ಷಮಿಸು." ಎಂದು ಕೇಳಿ ಕೊಂಡನು.

"ಅಯ್ಯಾ, ನಾನು ಕ್ಷಮಿಸಬಹುದಾದಷ್ಟೂ ಕ್ಷಮಿಸುತ್ತೇನೆ. ಆದರೆ, ನಾನು ಬುದ್ಧನ ಶಾಸನದಲ್ಲಿ ಅಚಲಿತವಾದ ಪ್ರಸನ್ನತೆಯನ್ನು ಪಡೆದಿರುವ ಮನೆಯವರ ಮಗಳು. ನನಗೆ ಇಷ್ಟಬಂದಂತೆ ಭಿಕ್ಷುಗಳ ಸಂಘಕ್ಕೆ ನಾನು ಪೂಜೆಮಾಡಬಹುದಾದರೆ, ನಾನು ಇಲ್ಲಿ ವಾಸಮಾಡುತ್ತೇನೆ."

"ಅಮ್ಮ, ನಿನಗೆ ಹೇಗೆ ಇಷ್ಟವೋ ಹಾಗೆ ನೀನು ಶ್ರಮಣರನ್ನು ಪೂಜಿಸಿಕೊ."

ಆಗ ವಿಶಾಖಾ, ದಶಬಲನಾದ ಬುದ್ಧಭಗವಂತನನ್ನು ಮಾರನೆಯ ದಿವಸ ಮನೆಯಲ್ಲಿ ಭಿಕ್ಷೆಗೆ ಬರಮಾಡಿಕೊಂಡಳು. ಅನ್ಯ ಸಂನ್ಯಾಸಿಗಳು ಗುರು ಮಿಗಾರಶ್ರೇಷ್ಠಿಯ ಮನೆಗೆ ಹೋಗುವನೆಂಬುದನ್ನು ತಿಳಿದು, ಅಲ್ಲಿಗೆ ಹೋಗಿ, ಮನೆಯನ್ನು ಸುತ್ತುಗಟ್ಟಿ ಕುಳಿತರು.

ವಿಶಾಖಾ ಗುರುವಿನ ಕೈಗೆ ದಕ್ಷಿಣೋದಕವನ್ನು ಕೊಟ್ಟು, "ಸರ್ವ ಸತ್ಕಾರವೂ ಸಿದ್ಧವಾಗಿದೆ. ಮಾವನವರು ಬಂದು ದಶಬಲನನ್ನು ಸೇವಿಸಲಿ." ಎಂದು ಹೇಳಿಕಳಿಸಿದಳು.

ಮಿಗಾರಶ್ರೇಷ್ಠಿಯೇನೋ ಹೋಗಬಯಸಿದನು. ಆದರೆ ಅನ್ಯ ಸಂನ್ಯಾಸಿಗಳು "ಗೃಹಪತಿಯೆ, ನೀನು ಶ್ರಮಣ ಗೌತಮನ ಹತ್ತಿರ ಹೋಗಬೇಡ." ಎಂದು ಅವನನ್ನು ತಡೆದರು. ಅವನಾದರೂ "ಸೊಸೆ ತಾನೇ ಸೇವೆ ಮಾಡಲಿ." ಎಂದು ಹೇಳಿಕಳಿಸಿಬಿಟ್ಟನು.

ವಿಶಾಖಾ, ಬುದ್ಧ ಮೊದಲಾದ ಭಿಕ್ಷುಸಂಘವನ್ನು ತಾನೇ ಸೇವಿಸಿ, ಊಟವೆಲ್ಲ ಮುಗಿದ ಮೇಲೆ, ಮಾವನಿಗೆ ಪುನಃ ಹೇಳಿಕಳಿಸಿದಳು: "ಮಾವನವರು ಬಂದು, ಧರ್ಮಕಥೆಗೆ ಕಿವಿಕೊಡಲಿ." ಎಂದು.

"ಈಗ ಹೋಗದೆ ಇರುವುದು ಅತ್ಯಂತ ಅಯುಕ್ತವಾಗುತ್ತದೆ." ಎಂದು ಶ್ರೇಷ್ಠಿ ಧರ್ಮವನ್ನು ಕೇಳಬೇಕೆಂದು ಇಚ್ಛಿಸಿ, ಹೋಗಲು ಎದ್ದರೆ, ಅನ್ಯಸಂನ್ಯಾಸಿಗಳು ಹೇಳಿದರು:

"ಹಾಗಾದರೆ, ಶ್ರಮಣ ಗೌತಮನ ಧರ್ಮವನ್ನು ಕೇಳುವುದಾದರೆ, ತೆರೆಯ ಹೊರಗಡೆ ಕುಳಿತು, ಕೇಳಿಕೊ."

ಎಂದು ಹೇಳಿ, ಅವನಿಗಿಂತ ಮೊದಲೇ ಹೋಗಿ, ಸುತ್ತಲೂ ಒಂದು ತೆರೆಯನ್ನು ಇರಿಸಿದರು. ಅವನು ಹೋಗಿ, ತೆರೆಯ ಹೊರಗಡೆ ಕುಳಿತನು.

ಆಗ ಗುರು "ನೀನು ತೆರೆಯ ಹೊರಗಾದರೂ ಕುಳ್ಳಿರು; ಅಥವಾ ಗೋಡೆಯ ಮರೆಯ ಆಚೆ, ಪರ್ವತದ ಆಚೆ, ಚಕ್ರವಾಳಗಳ ಆಚೆ ಬೇಕಾದರೂ ಕುಳ್ಳಿರು. ಬುದ್ಧನೆಂಬ ನಾನು ನನ್ನ ಶಬ್ದವನ್ನು ನಿನ್ನ ಕಿವಿಗೆ ಕೇಳಿಸಲು ಬಲ್ಲೆ." ಎಂದು, ಮಹಾ ಜಂಬೂವೃಕ್ಷವನ್ನು ಹಿಡಿದು ಅಲುಗಿಸುವ ಹಾಗೆ, ಅಮೃತದ ಮಳೆಯನ್ನು ಕರೆಯುವ ಹಾಗೆ, ಧರ್ಮವನ್ನು ಉಪದೇಶಿಸಲು ಆರಂಭಿಸಿದನು.

ಸಮ್ಯಕ್ ಸಂಬುದ್ಧನು ಧರ್ಮವನ್ನು ದೇಶನ ಮಾಡತೊಡಗಿದರೆ—ಮುಂದೆ ನಿಂತಿರಲಿ, ಹಿಂದೆ ನಿಂತಿರಲಿ, ನೂರು ಚಕ್ರವಾಳವಲ್ಲ ಸಾವಿರ ಚಕ್ರವಾಳಗಳ ಆಚೆ ನಿಂತಿರಲಿ, ಅಕನಿಷ್ಠ ಭವನಗಳಲ್ಲೇ ನಿಂತಿರಲಿ,—ಕೇಳಿದವರು 'ಗುರು ನನ್ನನ್ನೇ ನೋಡುತ್ತಿದ್ದಾರೆ, ನನಗೇ ಬೋಧಿಸುತ್ತಿದ್ದಾರೆ' ಎನ್ನುತ್ತಾರೆ. ಗುರುವಾದರೂ ಅವರವರನ್ನೇ ನೋಡುತ್ತಿರುವ ಹಾಗೆ, ಅವರವರೊಡನೆಯೇ ಮಾತನಾಡುತ್ತಿರುವ ಹಾಗೆ ಆಗುತ್ತದೆ.

ಬುದ್ಧರುಗಳು ಚಂದ್ರಸಂಥವರು. ಚಂದ್ರನು ಗಗನದ ನಡುವೆ ಇದ್ದರೂ 'ನನ್ನ ಮೇಲೆ ಚಂದ್ರ, ನನ್ನ ಮೇಲೆ ಚಂದ್ರ' ಎಂದು ಪ್ರತಿಯೊಬ್ಬರೂ ಎಂದುಕೊಳ್ಳುವ ಹಾಗೆ, ಯಾರು ಎಲ್ಲೇ ನಿಂತರೂ ಬುದ್ಧನು ಎದುರಿಗೆ ಇದ್ದಂತೆಯೇ ಭಾಸವಾಗುವುದು.

ಬುದ್ಧನಿಗೆ ಇಂತಹ ಪ್ರಭಾವ ಬಂದದ್ದು—ಆತನು ತನ್ನ ಹಿಂದಿನ ಜನ್ಮಗಳಲ್ಲಿ ತನ್ನ ತಲೆಯನ್ನು ಕತ್ತರಿಸಿಕೊಟ್ಟದ್ದು, ತನ್ನ ಕಣ್ಣುಗಳನ್ನು ಕಿತ್ತು ಒಪ್ಪಿಸಿದ್ದು, ತನ್ನ ಹೃದಯದ ಮಾಂಸವನ್ನು ತೆಗೆದು ಕೊಟ್ಟದ್ದೂ ಅಲ್ಲದೆ, ಜಾಲಿಯಂಥ ಗಂಡುಮಕ್ಕಳನ್ನೂ ಕೃಷ್ಣಾಜಿನೆಯಂಥ ಹೆಣ್ಣು ಮಕ್ಕಳನ್ನೂ ಮಾದ್ರಿಯಂಥ ಪತ್ನಿಯರನ್ನೂ ಇತರರಿಗೆ ದಾಸರಾಗುವಂತೆ ಪರಿತ್ಯಾಗಮಾಡಿದ ದಾನಗುಣದ ಫಲವೆಂದು ಹೇಳುವರು.

ಮಿಗಾರಶ್ರೇಷ್ಠಿಯಾದರೂ ತಥಾಗತನ ದೇಶನವನ್ನು ಮನಸ್ಸಿನಲ್ಲಿಯೇ ತಿರುವಿಹಾಕುತ್ತ, ತೆರೆಯ ಹೊರಗಡೆ ಕುಳಿತಿದ್ದಂತೆಯೇ, ಸಾವಿರ ನಯಗಳಿಂದ ಅಲಂಕೃತವಾದ ಸ್ರೋತಾಪತ್ತಿ ಫಲದಲ್ಲಿ ಪ್ರತಿಷ್ಠಿತನಾಗಿ, ಅಚಲವಾದ ಶ್ರದ್ಧೆಯಿಂದ ಕೂಡಿದವನಾದನು. ಬುದ್ಧ, ಧರ್ಮ, ಸಂಘ ಎಂಬ ಮೂರು ಶರಣಗಳಲ್ಲಿ ಶಂಕೆಯಿಲ್ಲದವನಾದನು.

ಆಗಲೇ ತೆರೆಯನ್ನು ಮೇಲೆತ್ತಿ ಹೋಗಿ, ಸೊಸೆಯ ಎದುರಿಗೆ ಕೈಮುಗಿದು ನಿಂತು, "ಇಂದಿನಿಂದ ನೀನು ನನ್ನ ತಾಯಿ" ಎಂದು ಆಕೆಯನ್ನು ತನ್ನ ಮಾತೃಸ್ಥಾನದಲ್ಲಿ ಇರಿಸಿಕೊಂಡನು.

ಅಂದಿನಿಂದ ತೊಡಗಿ ವಿಶಾಖೆಗೆ 'ಮಿಗಾರಮಾತಾ' ಎಂದು ಹೆಸರಾಯಿತು. ಅನಂತರದ ಕಾಲವಲ್ಲಿ ಆಕೆಗೆ ಗಂಡು ಮಗು ಆದಾಗ, ಆ ಮಗುವಿಗೆ 'ಮಿಗಾರ' ಎಂದು ಹೆಸರಾಯಿತು.

ಮಹಾಶ್ರೇಷ್ಠಿ ಸೊಸೆಯ ಸಮೀಪದಿಂದ ಭಗವಂತನ ಬಳಿ ಸಾರಿ ಪಾದಗಳಿಗೆ ಬಿದ್ದು, ಕೈಗಳಿಂದ ಪಾದವನ್ನು ಸವರಿ, ಮುಖದಿಂದ ಚುಂಬಿಸಿ, "ಭಗವನ್, ನಾನು ಮಿಗಾರ." ಎಂದು ಮೂರುಬಾರಿ ತನ್ನ ಹೆಸರು ಹೇಳಿಕೊಂಡು, "ಭಗವನ್, ಇಷ್ಟು ಕಾಲವೂ 'ಇಂಥವರಿಗೆ ಕೊಟ್ಟದ್ದರಿಂದ ಮಹಾಫಲವಾಗುತ್ತದೆ' ಎಂಬುದನ್ನು ತಿಳಿಯದೆ ಇದ್ದೆ. ಈಗ ನನ್ನ ಸೊಸೆಯಿಂದ ತಿಳಿದುಕೊಂಡೆ. ಈಗ ಸರ್ವ ಅಪಾಯಗಳಿಂದಲೂ ದುಃಖದಿಂದಲೂ ಮುಕ್ತನಾದೆ. ನನ್ನ ಸೊಸೆ ಈಗ ಮನೆಗೆ ಬಂದದ್ದು ನನ್ನ ಅರ್ಥಕ್ಕಾಗಿ, ನನ್ನ ಹಿತಕ್ಕಾಗಿ, ಬಂದಂತಾಯಿತು." ಎಂದು ಬಿನ್ನವಿಸಿದನು.

ಮಾರನೆಯ ದಿವಸ ವಿಶಾಖಾ ಭಗವಂತನನ್ನು ಭಿಕ್ಷೆಗೆ ಕರೆದಳು. ಅದರ ಮಾರನೆಯ ದಿವಸ ಆಕೆಯ ಅತ್ತೆ ಸ್ರೋತಾಪತ್ತಿ ಫಲವನ್ನು ಪಡೆದಳು. ಆಗಿನಿಂದ ಬುದ್ಧನ ಧರ್ಮಕ್ಕೆ ಅವರ ಮನೆ ತೆರೆದ ಬಾಗಿಲಿನದಾಯಿತು.

ಆಗ ಮಿಗಾರಶ್ರೇಷ್ಠಿ ಹೀಗೆ ಚಿಂತಿಸಿದನು : "ನನ್ನ ಸೊಸೆಯಿಂದ ನನಗೆ ಬಹು ಉಪಕಾರವಾಗಿದೆ. ಆಕೆಗೆ ಪಾರಿತೋಷಕ ಕೊಡುತ್ತೇನೆ. ಆಕೆಯ ಮಹಾಲತಾಪ್ರಸಾಧನವು ತುಂಬ ಭಾರವಾಗಿರುವುದರಿಂದ, ನಿತ್ಯವೂ ಅದನ್ನು ಧರಿಸಲು ಆಗುವುದಿಲ್ಲ. ಅದರಿಂದ, ಆಕೆ ಕುಳ್ಳಿರಲಿ, ನಿಂತಿರಲಿ, ನಡೆಯುತ್ತಿರಲಿ, ಮಲಗಿರಲಿ, ಯಾವಾಗಲೂ ಹಗಲೂ ರಾತ್ರಿಯೂ ಧರಿಸಲು ಶಕ್ಯವಾಗುವಂತೆ ಹಗುರವಾಗಿರುವ ಆಭರಣವನ್ನು ಮಾಡಿಸಿಕೊಡುತ್ತೇನೆ." ಎಂದುಕೊಂಡು, ನೂರು ಸಾವಿರ ಬೆಲೆಬಾಳುವ 'ಘನಮೃಷ್ಟಕ' ಎಂಬ ಆಭರಣವನ್ನು ಮಾಡಿಸಿದನು.

ಅದು ಆಗಿ ಮುಗಿದಾಗ, ಬುದ್ಧನೇ ಮೊದಲಾದ ಭಿಕ್ಷುಸಂಘವನ್ನು ಭಿಕ್ಷೆಗೆ ಕರೆದು, ತೃಪ್ತಿಯಾಗುವಂತೆ ಭೋಜನಮಾಡಿಸಿದನು. ಹದಿನಾರು ಗಂಧೋದಕದ ಘಟಗಳಿಂದ ವಿಶಾಖೆಗೆ ಸ್ನಾನಮಾಡಿಸಿ, ಗುರುವಿನ ಎದುರಿಗೆ ಆಕೆಯನ್ನು ನಿಲ್ಲಿಸಿ, ಘನವೃಷ್ಟಕದಿಂದ ಅಲಂಕರಿಸಿ, ಗುರುವಿಗೆ ವಂದನೆ ಮಾಡಿಸಿದನು.

ಗುರು ಅನುಮೋದನೆ ಮಾಡಿ, ವಿಹಾರಕ್ಕೆ ತೆರಳಿದನು

— ೬ —

ಅಂದಿನಿಂದ ವಿಶಾಖಾ ದಾನ ಮೊದಲಾದ ಪುಣ್ಯಗಳನ್ನು ಮಾಡುತ್ತಾ, ಗುರುವಿನ ಅನುಗ್ರಹಕ್ಕೆ ಪಾತ್ರಳಾದಳು. ಗಗನ ತಲದಲ್ಲಿ ಚಂದ್ರಲೇಖೆ ಹೇಗೋ ಹಾಗೆ ಕೋಳಗಿ ಬೆಳಗುತ್ತಾ ಗಂಡುಮಕ್ಕಳನ್ನೂ ಹೆಣ್ಣು ಮಕ್ಕಳನ್ನೂ ಪಡೆದಳು. ಆಕೆಗೆ ಹತ್ತು ಗಂಡುಮಕ್ಕಳೂ ಹತ್ತು ಹೆಣ್ಣು ಮಕ್ಕಳೂ ಆದರಂತೆ. ಅವರಲ್ಲಿ ಪ್ರತಿಯೊಬ್ಬರಿಗೂ ಹತ್ತು ಹತ್ತು ಗಂಡು ಮಕ್ಕಳೂ ಹತ್ತು ಹತ್ತು ಹೆಣ್ಣು ಮಕ್ಕಳೂ ಆದರಂತೆ. ಅವರಲ್ಲಿ ಪ್ರತಿಯೊಬ್ಬರಿಗೂ ಮತ್ತೆ ಹಾಗೇ ಆದರಂತೆ. ಹೀಗೆ ವಿಶಾಖೆಯ ಮಕ್ಕಳೂ ಮೊಮ್ಮಕ್ಕಳೂ ಮರಿಮಕ್ಕಳೂ ಒಟ್ಟು ಎಂಟು ಸಾವಿರದ ನಾಲ್ಕುನೂರ ಇಪ್ಪತ್ತು ಆದರಂತೆ. ವಿಶಾಖಾ ತಾನೇ ನೂರಇಪ್ಪತ್ತು ವರ್ಷ ಬದುಕಿದ್ದಳು, ಆದರೂ ತಲೆಯಲ್ಲಿ ನರೆಗೂದಲೆಂಬುದು ಒಂದೂ ಇರಲಿಲ್ಲ; ಹದಿನಾರು ವರ್ಷದವಳ ಹಾಗೆ ಇದ್ದಳು.

ಮಕ್ಕಳು ಮೊಮ್ಮಕ್ಕಳ ಸಂಗಡ ವಿಶಾಖಾ ವಿಹಾರಕ್ಕೆ ಹೋಗುವುದನ್ನು ಕಂಡು, "ಇವರಲ್ಲಿ ವಿಶಾಖೆ ಯಾರು ?" ಎಂದು ಕೇಳುವವರೂ ಇದ್ದರು. ಆಕೆ ನಡೆಯುತ್ತಿರುವುದನ್ನು ಕಂಡವರು, "ಸ್ವಲ್ಪ ಹಾಗೇ ಹೋಗಲಿ, ನಮ್ಮ ಆರ್ಯೆ ನಡೆಯುವುದನ್ನು ನೋಡಲು ಚೆನ್ನು." ಎಂದುಕೊಳ್ಳುವರು. ಆಕೆ ನಿಲ್ಲಲಿ, ನಡೆಯಲಿ, ಕುಳಿತಿರಲಿ, ಮಲಗಿರಲಿ, "ಈ ಸ್ಥಿತಿ ಈಕೆಗೆ ಒಪ್ಪುವುದಿಲ್ಲ." ಎಂದು ಯಾರೂ ಹೇಳುವಂತಿರಲಿಲ್ಲ.

ಅಲ್ಲದೆ, ಆಕೆಗೆ ಐದು ಆನೆಗಳ ಬಲವಿತ್ತು. ರಾಜನು ಒಂದುಸಲ

'ವಿಶಾಖೆಗೆ ಐದು ಆನೆಗಳ ಬಲವುಂಟು' ಎಂದು ಕೇಳಿದನು. ಅದನ್ನು ವಿಮರ್ಶೆಮಾಡಬೇಕೆಂದು, ಆಕೆ ವಿಹಾರಕ್ಕೆ ಹೋಗಿ, ಧರ್ಮವನ್ನು ಕೇಳಿಕೊಂಡು ಬರುವ ವೇಳೆಯಲ್ಲಿ ಆನೆಯನ್ನು ಬಿಡಿಸಿದನು. ಅದು ಸೊಂಡಿಲನ್ನು ಮೇಲೆತ್ತಿಕೊಂಡು, ವಿಶಾಖೆಗೆ ಎದುರಾಗಿ ಬಂದಿತು. ಆಕೆಯ ಪರಿವಾರದ ಸ್ತ್ರೀಯರು ಐದುನೂರು ಮಂದಿಯಲ್ಲಿ ಕೆಲವರು ಪಲಾಯನಮಾಡಿದರು, ಕೆಲವರು ಆಕೆಯ ಸುತ್ತಲೂ ನಿಂತರು. "ಇದು ಏಕೆ?" ಎಂದು ವಿಶಾಖಾ ಪ್ರಶ್ನಿಸಿದರೆ, "ರಾಜನು ಆರ್ಯೆಯ ಸಾಮರ್ಥ್ಯವನ್ನು ಪರೀಕ್ಷಿಸುವುದಕ್ಕಾಗಿ ಆನೆಯನ್ನು ಬಿಡಿಸಿದ್ದಾನೆ." ಎಂದರು.

ವಿಶಾಖಾ ಆನೆಯನ್ನು ಕಂಡು, "ಓಡುವುದರಿಂದ ಏನು? ನಾನು ಇದನ್ನು ಹೇಗೆ ಹಿಡಿಯಲಿ?" ಎಂದು ಚಿಂತಿಸಿ, "ಒಂದು ವೇಳೆ ಇದನ್ನು ದೃಢವಾಗಿ ಹಿಡಿದರೆ, ಇದು ನಾಶವಾಗುತ್ತದೆ." ಎಂದು ಎರಡು ಬೆರಳಿನಿಂದ ಅದರ ಸೊಂಡಿಲನ್ನು ಹಿಡಿದು, ಹಿಂದಕ್ಕೆ ತಳ್ಳಿದಳು. ಆನೆ ಅದನ್ನು ತಡೆದುಕೊಳ್ಳಲಾರದೆ, ರಾಜಾಂಗಣದ ನಡುವೆ ಕುಕ್ಕುರುಗಾಲಲ್ಲಿ ಕುಸಿದುಬಿದ್ದಿತು. ಮಹಾಜನರೆಲ್ಲ ಸಾಧುಕಾರ ಮಾಡಿದರು. ವಿಶಾಖಾ ತನ್ನ ಪರಿವಾರದೊಡನೆ ಸ್ವಸ್ತವಾಗಿ ಮನೆಗೆ ಹೋದಳು.

ಆ ಕಾಲದಲ್ಲಿ, ಶ್ರಾವಸ್ತಿಯಲ್ಲಿ, ಮಿಗಾರಮಾತೆಯಾದ ವಿಶಾಖೆಯು ಅನೇಕ ಮಕ್ಕಳನ್ನೂ ಮರಿಮಕ್ಕಳನ್ನೂ ಉಳ್ಳವಳಾಗಿದ್ದಳು. ಅವರೆಲ್ಲ ರೋಗವಿಲ್ಲದವರಾಗಿದ್ದರು. ವಿಶಾಖಾ ಮನೆಗೆ ಮಂಗಲರೂಪಿಯಾಗಿದ್ದಳು. ಆಕೆಯ ಮಕ್ಕಳಲ್ಲಿ ಮೊಮ್ಮಕ್ಕಳಲ್ಲಿ ಮರಿಮಕ್ಕಳಲ್ಲಿ ಯಾರಿಗೂ ಮರಣವೆಂಬುದು ಸಂಭವಿಸಿರಲಿಲ್ಲ. ಶ್ರಾವಸ್ತಿಯ ನಿವಾಸಿಗಳು ಮಂಗಲದ ಮುಹೂರ್ತಗಳಲ್ಲಿ ವಿಶಾಖೆಯನ್ನು ಮೊದಲು ಬರಮಾಡಿಕೊಂಡು, ಆಕೆಗೆ ಭೋಜನಮಾಡಿಸುವರು.

— ೭ —

ಆಗ ಒಂದಾನೊಂದು ಉತ್ಸವದ ದಿವಸ, ಮಹಾಜನಗಳು ಅಲಂಕಾರ ಮಾಡಿಕೊಂಡು, ಧರ್ಮವನ್ನು ಶ್ರವಣಮಾಡುವುದಕ್ಕಾಗಿ ವಿಹಾರಕ್ಕೆ ಹೋಗುತ್ತಿದ್ದರು. ವಿಶಾಖಾ ತನ್ನನ್ನು ಊಟಕ್ಕೆ ಕರೆದಿದ್ದ ಮನೆ

ಯಲ್ಲಿ ಊಟ ಮಾಗಿಸಿಕೊಂಡು, ಮಹಾಲತಾಪ್ರಸಾಧನದಿಂದ ಅಲಂಕಾರ ಮಾಡಿಕೊಂಡು, ಮಹಾಜನರೊಡನೆ ತಾನೂ ವಿಹಾರಕ್ಕೆ ಹೋದಳು.

ಅಲ್ಲಿ ತನ್ನ ಆಭರಣಗಳನ್ನು ಕಳಚಿ, ಹೊದೆದಿದ್ದ ವಸ್ತ್ರದಲ್ಲಿ ಅದನ್ನು ಸುತ್ತಿ, "ಏನೇ, ಈ ಒಡವೆಯನ್ನು ಹಿಡಿದುಕೋ." ಎಂದು ದಾಸಿಯ ಕೈಗೆ ಕೊಟ್ಟಳು.

ಮತ್ತೆ ವಿಹಾರಕ್ಕೆ ಹೋಗುತ್ತಾ, "ಇಂತಹ ಮಹಾರ್ಘವಾದ ಆಭರಣದಿಂದ ಅಲಂಕರಿಸಿಕೊಂಡು ವಿಹಾರವನ್ನು ಪ್ರವೇಶಿಸುವುದು ಯುಕ್ತವಲ್ಲ." ಎಂದು ಅದನ್ನು ಕಳಚಿ, ಗಂಟು ಕಟ್ಟಿ, ದಾಸಿಯ ಕೈಯಲ್ಲಿ ಕೊಟ್ಟಳು.

ಆ ದಾಸಿ ತನ್ನ ಸ್ವಂತ ಪುಣ್ಯದಿಂದ ಐದು ಆನೆಗಳ ಸಾಮರ್ಥ್ಯವನ್ನು ಹೊಂದಿದ್ದವಳು. ಮಹಾಲತಾಪ್ರಸಾಧನವನ್ನು ಹೊರುವುದು ಅವಳೊಬ್ಬಳಿಂದ ಮಾತ್ರ ಸಾಧ್ಯವಾಗಿತ್ತು.

ಆದ್ದರಿಂದ ಅವಳಿಗೆ ಹೇಳಿದಳು : "ಅಮ್ಮ, ಈ ಆಭರಣವನ್ನು ಹಿಡಿದುಕೊ. ಗುರುವಿನ ಬಳಿಯಿಂದ ಹಿಂದಿರುಗುವ ಸಮಯದಲ್ಲಿ ಅಲಂಕರಿಸಿಕೊಳ್ಳುತ್ತೇನೆ."

ಹೀಗೆ, ಅದನ್ನು ಅವಳ ಕೈಗೆ ಕೊಟ್ಟು, ಘನವೃಷ್ಟಕವೆಂಬ ಆಭರಣವನ್ನು ಅಲಂಕರಿಸಿಕೊಂಡು, ಗುರುವಿನ ಬಳಿಗೆ ಬಂದು, ಧರ್ಮವನ್ನು ಕೇಳಿದಳು. ಧರ್ಮಶ್ರವಣವಾದ ಮೇಲೆ, ಭಗವಂತನಿಗೆ ವಂದಿಸಿ, ಎದ್ದು, ಹೊರಟಳು.

ಆಕೆಯ ದಾಸಿಯು, ಆ ಆಭರಣವನ್ನು ಅಲ್ಲೇ ಮರೆತು, ತಾನೂ ಎದ್ದು ಹೊರಟಳು.

ಸಭೆಯವರು ಧರ್ಮವನ್ನು ಕೇಳಿ, ಎದ್ದು ಹೊರಟಮೇಲೆ, ಅವರು ಏನಾದರೂ ಮರೆತುಬಿಟ್ಟು ಹೋಗಿರುವುದುಂಟೋ ಎಂದು ನೋಡುವುದು ಸ್ಥವಿರ ಆನಂದನ ಪದ್ಧತಿ. ಅದರಂತೆ ಆ ದಿವಸವೂ ಹೋಗಿ, ಆ ಮಹಾಲತಾಪ್ರಸಾಧನವನ್ನು ಕಂಡು, ಗುರುವಿಗೆ ತಿಳಿಸಿದನು :

"ಭಗವನ್, ವಿಶಾಖಾ ತನ್ನ ಆಭರಣವನ್ನು ಮರೆತುಹೋಗಿದ್ದಾಳೆ."

''ಒಂದು ಕಡೆ ತೆಗೆದಿಡು, ಆನಂದ.''

ಸ್ಥವಿರನು ಅದನ್ನು ಎತ್ತಿ, ಮೆಟ್ಟಲಿನ ಪಕ್ಕದಲ್ಲಿ ತೂಗುಹಾಕಿದನು.

ವಿಶಾಖಾ ''ಇಲ್ಲಿಗೆ ಬರುವ ಹೋಗುವ ಭಿಕ್ಷುಗಳಿಗೆ ಏನಾದರೂ ಬೇಕಾಗಿದ್ದರೆ, ಯಾರಿಗಾದರೂ ಔಷಧಿಯ ಅವಶ್ಯಕತೆಯಿದ್ದರೆ, ವಿಚಾರಿಸೋಣ.'' ಎಂದು ಸುಪ್ರಿಯೆ ಎಂಬವಳೊಡನೆ ವಿಹಾರದ ಒಳಗಡೆ ತಿರುಗಾಡಿದಳು.

ವಿಹಾರದಲ್ಲಿದ್ದ ಚಿಕ್ಕ ವಯಸ್ಸಿನ ಶ್ರಮಣರೂ ಹೊಸದಾಗಿ ಶ್ರಮಣರಾದವರೂ ಈ ಇಬ್ಬರು ಉಪಾಸಿಕೆಯರನ್ನು ಕಂಡಾಗ, ತಮ್ಮ ಪಾತ್ರೆಗಳನ್ನು ಹಿಡಿದೆತ್ತಿ ಕೊಂಡು ಹೋಗಿ, ತಮಗೆ ಬೇಕಾದ ತುಪ್ಪ, ಜೇನು, ಎಣ್ಣೆಗಳನ್ನು ಕೇಳಿ ಪಡೆಯುವರು. ಆ ದಿವಸವೂ ಹಾಗೇ ತಿರುಗಾಡಿದರು.

ಸುಪ್ರಿಯಾ ಒಬ್ಬಾನೊಬ್ಬ ಕಾಯಿಲೆ ಭಿಕ್ಷುವನ್ನು ಕಂಡು, "ಆರ್ಯನಿಗೆ ಏನು ಬೇಕು?" ಎಂದು ಕೇಳಿದಳು. "ಮಾಂಸದ ಕಟ್ಟುಸಾರು" ಎಂದು ಅವನು ಕೇಳಲು, ಮಾರನೆಯ ದಿವಸ, ಕಟ್ಟುಸಾರಿಗೆ ತಕ್ಕ ಮಾಂಸ ದೊರಕದಿರಲಾಗಿ, ತನ್ನ ತೊಡೆಯ ಮಾಂಸವನ್ನೇ ಕತ್ತರಿಸಿ, ಕಟ್ಟುಸಾರು ಮಾಡಿ ಕೊಟ್ಟಳು. ಬುದ್ಧ ಗುರುವಿನಲ್ಲಿ ಆಕೆಗೆ ಇದ್ದ ಶ್ರದ್ಧೆಯಿಂದ ಆಕೆಯ ಮೈ ಮತ್ತೆ ಮೊದಲಿನ ಸಹಜಸ್ಥಿತಿಗೆ ಬಂತು.

ವಿಶಾಖಾ ಆ ವಿಹಾರದಲ್ಲಿನ ರೋಗಿಗಳನ್ನೂ ಚಿಕ್ಕವಯಸ್ಸಿನ ಶ್ರಮಣರನ್ನೂ ಹೊಸದಾಗಿ ಶ್ರಮಣರಾದವರನ್ನೂ ವಿಚಾರಿಸಿಕೊಂಡು, ಬೇರೊಂದು ಬಾಗಿಲಿನಿಂದ ಹೊರಗೆ ಬಂದಳು. ವಿಹಾರದ ಹೊರಗೆ ನಿಂತು, "ಅಮ್ಮಾ, ನನ್ನ ಆಭರಣವನ್ನು ತಾ. ಅಲಂಕರಿಸಿಕೊಳ್ಳುತ್ತೇನೆ." ಎಂದಳು.

ಆಗ ಆ ದಾಸಿ, ತಾನು ಮರೆತು ಬಂದದ್ದನ್ನು ಜ್ಞಾಪಿಸಿಕೊಂಡು, "ಆರ್ಯೆ, ನಾನು ಮರೆತುಹೋದೆ." ಎಂದಳು.

"ಹಾಗಾದರೆ, ಹೋಗಿ ತೆಗೆದುಕೊಂಡು ಬಾ. ಒಂದು ವೇಳೆ ಸ್ಥವಿರ ಆನಂದನೇನಾದರೂ ಅದನ್ನು ಎತ್ತಿ ಒಂದು ಕಡೆ ಇರಿಸಿರುವುದಾದರೆ, ಅದನ್ನು ತರಬೇಡ. ಅದನ್ನು ನಾನು ಆರ್ಯ ಆನಂದನಿಗೆ ಬಿಟ್ಟುಕೊಡುತ್ತೇನೆ."

"ಜನರು ಮರೆತು ಹೋದುದನ್ನು ನೋಡಿ. ಒಂದು ಕಡೆ ತೆಗೆದಿಡು ವುದು ಆನಂದನ ಅಭ್ಯಾಸ" ಎಂದು ವಿಶಾಖಾ ಬಲ್ಲಳು. ಆದ್ದರಿಂದ ಹಾಗೆ ಹೇಳಿದಳು.

ಸ್ಥವಿರ ಆನಂದನು ಆ ದಾಸಿಯನ್ನು ಕಂಡನು. "ಏನು ಕಾರಣ ಬಂದೆ?" ಎಂದು ಪ್ರಶ್ನಿಸಿದನು.

"ಆರ್ಯೆಯ ಆಭರಣವನ್ನು ನಾನು ಇಲ್ಲಿ ಮರೆತು ಹೋದೆ."

"ಅದನ್ನು ನಾನು ಮೆಟ್ಟಿಲಿನ ಪಕ್ಕದಲ್ಲಿ ತೆಗೆದಿರಿಸಿದ್ದೇನೆ. ಹೋಗಿ, ತೆಗೆದುಕೋ."

"ತಮ್ಮ ಕೈಯಿಂದ ಮುಟ್ಟಲಾದ ವಸ್ತು ಒಡವೆಯನ್ನು ಒಯ್ಯುದ ತರತಕ್ಕದ್ದಲ್ಲ, ಎಂದು ನಮ್ಮ ಆರ್ಯೆ ಹೇಳಿದ್ದಾಳೆ."

ಹೀಗೆಂದು ಆ ದಾಸಿ ಸಂತೋಷದಿಂದ, ಸಂಭ್ರಮದಿಂದ ತನ್ನ ಒಡತಿಯ ಬಳಿಗೆ ಹೋದಳು.

"ಏನೆ, ಅಮ್ಮ?" ಎಂದು ವಿಶಾಖಾ ಕೇಳಿದಳು.

ಆ ದಾಸಿ ಕಥೆಯನ್ನೆಲ್ಲಾ ತಿಳಿಸಿದಳು.

"ನನ್ನ ಆರ್ಯನು ಮುಟ್ಟಿದ ಒಡವೆಯನ್ನು ನಾನು ಮತ್ತೆ ಧರಿಸುವುದಿಲ್ಲ. ನಾನು ಅದನ್ನು ಆತನಿಗೇ ಬಿಟ್ಟುಕೊಟ್ಟಿದ್ದೇನೆ. ಆದರೆ ಅದನ್ನು ಕಾಪಾಡುವುದು ನನ್ನ ಒಡೆಯರಿಗೆ ಕಷ್ಟವಾದೀತು. ಆದ್ದರಿಂದ ಅದನ್ನು ನಾನು ಮಾರಿ, ಅದಕ್ಕೆ ಸಮನಾದ ದ್ರವ್ಯವನ್ನು ಅವರಿಗೆ ಒಪ್ಪಿಸುತ್ತೇನೆ. ಹೋಗಿ, ಅದನ್ನು ತೆಗೆದುಕೊಂಡು ಬಾ."

ಆ ದಾಸಿ ಹೋಗಿ, ಅದನ್ನು ತಂದಳು.

ವಿಶಾಖಾ ಅದನ್ನು ಧರಿಸಿಕೊಳ್ಳಲಿಲ್ಲ. ಅಕ್ಕಸಾಲಿಗರಿಗೆ ಹೇಳಿ ಕಳುಹಿಸಿ, ಬೆಲೆ ಕಟ್ಟಿಸಿದಳು.

"ಒಂಬತ್ತು ಕೋಟಿ ಬೆಲೆಯಾಗುತ್ತದೆ. ಮಾಡಿಸಿದ ಕೂಲಿ ನೂರು ಸಾವಿರ ಆಗುತ್ತದೆ." ಎಂದರು.

ವಿಶಾಖಾ ಅದನ್ನು ಒಂದು ಗಾಡಿಯಲ್ಲಿ ಇರಿಸಿ, "ಇದನ್ನು ಮಾರಿ ಬನ್ನಿ." ಎಂದಳು.

ಅಷ್ಟು ಧನ ಕೊಟ್ಟು ಅದನ್ನು ಕೊಳ್ಳುವುದು ಯಾರಿಗೂ ಸಾಧ್ಯವಾಗಲಿಲ್ಲ. ಆ ಆಭರಣದಿಂದ ಅಲಂಕಾರ ಮಾಡಿಕೊಳ್ಳಲು ತಕ್ಕಂತಹ ಸಮರ್ಥಸ್ತ್ರೀಯರು ದೊರಕಲಿಲ್ಲ.

ಪೃಥ್ವೀಮಂಡಲದಲ್ಲಿ ಮಹಾಲತಾಪ್ರಸಾಧನದಂತಹ ಆಭರಣವನ್ನು ಅಲಂಕರಿಸಿಕೊಳ್ಳಬಲ್ಲವರು ಆ ಕಾಲಕ್ಕೆ ಮೂವರು ಮಾತ್ರ : ಮಹಾ ಉಪಾಸಿಕೆಯಾದ ವಿಶಾಖಾ ಒಬ್ಬಳು; ಮಲ್ಲಕುಲದ ಸೇನಾಪತಿಯಾದ ಬಂಧುಲನ ಭಾರ್ಯೆ ಅವಳೊಬ್ಬಳು; ಮತ್ತೆ, ವಾರಾಣಸೀ ನಗರದ ಶ್ರೇಷ್ಠಿಯ ಮಗಳಾದ ಮಲ್ಲಿಕಾ ಒಬ್ಬಳು.

ಆದ ಕಾರಣ, ವಿಶಾಖಾ ತಾನೇ ಆ ಬೆಲೆಯನ್ನು ಕೊಟ್ಟು, ಒಂಬತ್ತು ಕೋಟಿಗೆ ಮೇಲೆ ನೂರು ಸಾವಿರವನ್ನು ಗಾಡಿಯಲ್ಲಿ ಹೇರಿಸಿಕೊಂಡು, ವಿಹಾರಕ್ಕೆ ಒಯ್ದು, ಗುರುವಿಗೆ ವಂದಿಸಿದಳು.

"ಭಗವನ್, 'ಆರ್ಯ ಆನಂದನು ನನ್ನ ಆಭರಣವನ್ನು ಮುಟ್ಟಿದ ಗಳಿಗೆಯಿಂದ ನಾನು ಅದನ್ನು ಧರಿಸುವುದಿಲ್ಲ. ಅದನ್ನು ಮಾರಿ ಅದರ ಬೆಲೆಯನ್ನು ತಂದು ಒಪ್ಪಿಸುತ್ತೇನೆ' ಎಂದುಕೊಂಡು, ಅದನ್ನು ಮಾರಲು ಹೊರಟು, ಅದನ್ನು ಕೊಳ್ಳಬಲ್ಲವರನ್ನು ಕಾಣಲಾರದೆ, ನಾನೇ ಅದರ ಬೆಲೆಯನ್ನು ತೆಗೆದುಕೊಂಡು ಬಂದಿದ್ದೇನೆ. ಆಹಾರ, ಅಭಯ, ವಿಹಾರ, ಭೈಷಜ್ಯಗಳೆಂಬ ನಾಲ್ಕರಲ್ಲಿ ಯಾವುದಕ್ಕೆ ಇದನ್ನು ವಿನಿಯೋಗಿಸಲಿ?" ಎಂದಳು.

ಗುರು ಹೇಳಿದನು :

"ವಿಹಾರದ ಪೂರ್ವದ್ವಾರದಲ್ಲಿ ಸಂಘಕ್ಕಾಗಿ ವಾಸಸ್ಥಾನವನ್ನು ಕಟ್ಟಿಸಿದರೆ, ಆಗಬಹುದೇ, ವಿಶಾಖಾ?"

"ಆಗಬಹುದು. ಭಗವನ್." ಎಂದು ವಿಶಾಖಾ ಹೇಳಿದಳು. ಆಕೆಯ ಮನಸ್ಸು ಸಂತುಷ್ಟವಾಯಿತು.

ಒಂಬತ್ತು ಕೋಟಿಗೆ ಭೂಮಿಯನ್ನು ಕೊಂಡಳು, ಇನ್ನೊಂದು ಒಂಬತ್ತು ಕೋಟಿಗೆ ವಿಹಾರವನ್ನು ಕಟ್ಟಿಸತೊಡಗಿದಳು.

ಆಗ ಒಂದು ದಿವಸ ಗುರು ಬೆಳಗಿನ ಜಾವದಲ್ಲಿ ಲೋಕವನ್ನು

ಅವಲೋಕಿಸುತ್ತಾ, ದೇವಲೋಕದಿಂದ ಚ್ಯುತಿಹೊಂದಿ ಭದ್ರಿಕನಗರದ ಶ್ರೇಷ್ಠಿಕುಲದಲ್ಲಿ ಹುಟ್ಟಿದ್ದ ಭದ್ರಿಕನೆಂಬ ಶ್ರೇಷ್ಠಿಪುತ್ರನು ಧರ್ಮವನ್ನು ಕೇಳಲು ಹದವಾದ ಚಿತ್ತವುಳ್ಳವನಾಗಿರುವನೆಂಬುದನ್ನು ಕಂಡು, ಅನಾಥ ಪಿಂಡಿಕನ ಮನೆಯಲ್ಲಿ ಭೋಜನಕೃತ್ಯವನ್ನು ಮಾಡಿಕೊಂಡು, ಉತ್ತರ ದ್ವಾರಕ್ಕೆ ಅಭಿಮುಖನಾದನು.

ಸಹಜವಾಗಿ, ಗುರು ವಿಶಾಖೆಯ ಮನೆಯಲ್ಲಿ ಭಿಕ್ಷೆಯನ್ನು ಸ್ವೀಕರಿಸಿ, ದಕ್ಷಿಣದ್ವಾರದಿಂದ ಹೊರಟು, ಜೇತವನದಲ್ಲಿ ತಂಗುವನು; ಅನಾಥ ಪಿಂಡಿಕನ ಮನೆಯಲ್ಲಿ ಭಿಕ್ಷೆಯನ್ನು ಗ್ರಹಿಸಿ, ಪೂರ್ವದ ಬಾಗಿಲಿನಿಂದ ಹೊರಟು, ಪೂರ್ವಾರಾಮದಲ್ಲಿ ತಂಗುವನು. ಆದ್ದರಿಂದ, ಉತ್ತರ ದ್ವಾರದ ಮೂಲಕ ಹೊರಟ ಭಗವಂತನನ್ನು ಕಂಡು 'ಸಂಚಾರ ಹೊರಟಿದ್ದಾನೆ' ಎಂದು ತಿಳಿದರು.

ವಿಶಾಖಾ ಆ ದಿವಸ 'ಗುರು ಉತ್ತರ ದ್ವಾರಾಭಿಮುಖವಾಗಿ ಹೊರಟನು' ಎಂದು ಕೇಳಿದೊಡನೆ ವೇಗದಿಂದ ಹೋಗಿ, ವಂದಿಸಿ, ಕೇಳಿದಳು:

"ಸಂಚಾರ ಹೊರಡಬೇಕೆಂದಿರುವಿರಾ, ಭಗವನ್?"

"ಹೌದು, ವಿಶಾಖಾ."

"ಭಗವನ್, ಇಷ್ಟು ಧನವನ್ನು ವ್ಯಯಮಾಡಿ ನಿಮಗಾಗಿ ವಿಹಾರವನ್ನು ಮಾಡಿಸುತ್ತಿದ್ದೇನೆ. ದಯಮಾಡಿ, ಹಿಂದಿರುಗಬೇಕು."

"ಈಗ ಹೊರಟಿರುವುದು ಹಿಂದಿರುಗುವಂತಿಲ್ಲ, ವಿಶಾಖೇ."

"ಒಳ್ಳೆಯದು. ಇದಕ್ಕೆ ಏನೋ ಸರಿಯಾದ ಕಾರಣವಿರಬೇಕು." ಎಂದುಕೊಂಡು ವಿಶಾಖೆ "ಹಾಗಾದರೆ, ಭಗವನ್, ಏನುಮಾಡಬೇಕು, ಏನುಮಾಡಬಾರದು ಎಂದು ನನಗೆ ತಿಳಿಸುವಂಥ ಭಿಕ್ಷು ಒಬ್ಬನನ್ನು ಹಿಂದಕ್ಕೆ ಕಳುಹಿಸಿ, ನೀವು ಹೋಗಿರಿ." ಎಂದಳು.

"ಯಾರು ನಿನಗೆ ಇಷ್ಟ ಬರುತ್ತದೋ, ಅವರ ಪಾತ್ರೆಯನ್ನು ತೆಗೆದುಕೋ, ವಿಶಾಖೆ."

ಆಕೆಗೆ ಸ್ಥವಿರ ಆನಂದನ ಮೇಲೆ ಪ್ರೀತಿಯಿದ್ದರೂ, "ಸ್ಥವಿರನಾದ ಮಹಾಮೌದ್ಗಲ್ಯಾಯನನು ಬುದ್ಧಿವಂತನು. ಇವನನ್ನು ಆಶ್ರಯಿಸಿ

ದರೆ, ನನ್ನ ಕರ್ಮ ಲಘುವಾಗಿ ನೆರವೇರುತ್ತದೆ." ಎಂದು ಚಿಂತಿಸಿ, ಆ ಸ್ಥವಿರನ ಪಾತ್ರೆಯನ್ನು ತೆಗೆದುಕೊಂಡಳು.

ಸ್ಥವಿರನು ಗುರುವಿನ ಕಡೆ ನೋಡಿದನು. ಗುರು "ನಿನ್ನ ಐನೂರು ಭಿಕ್ಷುಗಳ ಪರಿವಾರವನ್ನು ಕರೆದುಕೊಂಡು, ಹಿಂದಿರುಗು, ಮೌದ್ಗಲ್ಯಾಯನ." ಎಂದನು. ಅವನು ಹಾಗೇ ಮಾಡಿದನು.

ಮಹಾ ಮೌದ್ಗಲ್ಯಾಯನನ ಅನುಭಾವದಿಂದ ಐವತ್ತು ಅರುವತ್ತು ಯೋಜನಗಳ ದೂರವಾದರೂ ಅದೇ ದಿವಸವೇ ಬೇಕಾದ ದೊಡ್ಡ ಮರಗಳನ್ನೂ ದೊಡ್ಡ ಕಲ್ಲುಗಳನ್ನೂ ತಂದರು. ಮರಗಳನ್ನೂ ಕಲ್ಲುಗಳನ್ನೂ ಗಾಡಿಗಳ ಮೇಲೆ ಹೇರಿ ತರುವ ಕ್ಲೇಶವಿರಲಿಲ್ಲ, ಗಾಡಿಯ ಅಚ್ಚು ಮುರಿಯಲಿಲ್ಲ. ಸ್ವಲ್ಪ ಕಾಲದಲ್ಲಿಯೇ ಎರಡು ಅಂತಸ್ತಿನ ಪ್ರಾಸಾದವನ್ನು ಕಟ್ಟಿದರು. ಕೆಳಗಿನ ಅಂತಸ್ತಿನಲ್ಲಿ ಐನೂರು ಕೊಠಡಿಗಳ ಪ್ರಾಸಾದ ರಚನೆಯಾಯಿತು.

ಗುರು, ಒಂಬತ್ತು ತಿಂಗಳು ಕಾಲ ಸಂಚಾರ ಮುಗಿಸಿಕೊಂಡು, ಪುನಃ ಶ್ರಾವಸ್ತಿಗೆ ಬಂದನು. ಆ ಒಂಬತ್ತು ತಿಂಗಳಲ್ಲಿ ವಿಶಾಖೆಯ ಪ್ರಾಸಾದದ ಕಾರ್ಯ ಮುಗಿದು, ಅದರ ಮೇಲೆ ಹದಿನಾರು ಕೊಡ ನೀರು ಹಿಡಿಸುವಂಥ ತುದಿಯ ಕಲಶವನ್ನು ಚೊಕ್ಕ ಕೆಂಪು ಗಟ್ಟಿ ಚಿನ್ನದಿಂದ ಮಾಡಿಸುತ್ತಿದ್ದಳು.

'ಗುರು ಜೇತವನಕ್ಕೆ ಹೋಗುತ್ತಿದ್ದಾನೆ' ಎಂಬುದನ್ನು ಕೇಳಿ, ವಿಶಾಖಾ ಆತನನ್ನು ಎದುರುಗೊಂಡು, ಗುರುವನ್ನು ತಾನು ಕಟ್ಟಿಸುತ್ತಿದ್ದ ವಿಹಾರಕ್ಕೆ ಕರೆದುಕೊಂಡು ಹೋಗಿ, "ಭಗವನ್, ಭಿಕ್ಷುಸಂಘವನ್ನು ಕರೆದುಕೊಂಡು, ಈ ಮಳೆಗಾಲದ ನಾಲ್ಕು ತಿಂಗಳು ಇಲ್ಲಿಯೇ ವಾಸಮಾಡಬೇಕು. ಪ್ರಾಸಾದವನ್ನು ನಾನು ಮುಗಿಸಿಕೊಡುತ್ತೇನೆ." ಎಂದಳು.

ಗುರು ಸಮ್ಮತಿಸಿದನು.

ಆಕೆ ಅಂದಿನಿಂದ ತೊಡಗಿ, ಬುದ್ಧನೇ ಮೊದಲಾದ ಭಿಕ್ಷುಸಂಘಕ್ಕೆ ತನ್ನ ವಿಹಾರದಲ್ಲಿಯೇ ದಾನವನ್ನು ನೀಡುವಳು.

ಆಗ ವಿಶಾಖೆಯ ಸ್ನೇಹಿತೆಯೊಬ್ಬಳು, ಸಾವಿರ ಬೆಲೆ ಬಾಳುವ ಒಂದು ವಸ್ತ್ರವನ್ನು ಕೊಂಡು ಬಂದು, "ಗೆಳತಿ, ನಿನ್ನ ಪ್ರಾಸಾದದಲ್ಲಿ ನೆಲದ ಮೇಲೆ ಹಾಸಬೇಕೆಂದು ಈ ವಸ್ತ್ರವನ್ನು ತಂದಿದ್ದೇನೆ. ಇದನ್ನು ಎಲ್ಲಿ ಹಾಸಲಿ, ಹೇಳು." ಎಂದಳು.

"ಗೆಳತಿ, 'ಅವಕಾಶವಿಲ್ಲ' ಎಂದು ಹೇಳಿದರೆ, 'ನನಗೆ ಅವಕಾಶ ಕೊಡಲು ಇವಳಿಗೆ ಇಷ್ಟವಿಲ್ಲ' ಎಂದು ನೀನು ತಿಳಿದುಕೊಳ್ಳಬಹುದು. ನೀನೇ ಹೋಗಿ, ಪ್ರಾಸಾದದ ಎರಡು ಉಪ್ಪರಿಗೆಗಳಲ್ಲಿ ಸಾವಿರ ಕೊಠಡಿಗಳಿಗೂ ಹೋಗಿ, ಹಾಸಲು ಎಲ್ಲಿಯಾದರೂ ಎಡೆಯಿದೆಯೇ ಎಂದು ನೋಡಿ ಬಾ."

ಆಕೆ ಆ ಸಾವಿರ ಬೆಲೆ ಬಾಳುವ ವಸ್ತ್ರವನ್ನು ಹಿಡಿದುಕೊಂಡು, ಅಲ್ಲಿ ಸುತ್ತಿಯಾಡಿ, ತನ್ನ ವಸ್ತ್ರಕ್ಕಿಂತ ಕಡಿಮೆ ವಸ್ತ್ರವನ್ನು ಅಲ್ಲಿ ಎಲ್ಲೂ ಕಾಣದೆ, 'ಈ ಪ್ರಾಸಾದದಲ್ಲಿ ನನಗೆ ಪುಣ್ಯಭಾಗವ ಲಭ್ಯವಿಲ್ಲ' ಎಂದು ದುಮ್ಮಾನಪೊಂದಿ, ಒಂದು ಕಡೆ ಅಳುತ್ತಾ ನಿಂತಳು.

ಸ್ಥವಿರ ಆನಂದನು ಅವನ್ನು ಕಂಡು, "ಏಕೆ ಅಳುವುದು ?" ಎಂದು ಪ್ರಶ್ನಿಸಿದನು.

ಆಕೆ ತನ್ನ ಕಥೆಯನ್ನು ಹೇಳಿಕೊಂಡಳು.

ಸ್ಥವಿರನು "ಚಿಂತಿಸಬೇಡ. ಹಾಸುವ ಸ್ಥಳವನ್ನು ನಾನು ತೋರಿಸಿಕೊಡುತ್ತೇನೆ." ಎಂದು ಹೇಳಿ, "ಮೆಟ್ಟಲಿಗೂ ಕಾಲು ತೊಳೆಯುವ ಕಡೆಗೂ ನಡುವಿನ ಪ್ರದೇಶದಲ್ಲಿ ಇದನ್ನು ಕಾಲೊರಸುವ ವಸ್ತ್ರವಾಗಿ ಮಾಡಿ ಹಾಸಿಬಿಡು; ಭಿಕ್ಷುಗಳು ಕಾಲು ತೊಳೆದುಕೊಂಡು, ಮೊದಲು ಇದರ ಮೇಲೆ ಒರಸಿಕೊಂಡು, ಒಳಗೆ ಬರುವರು. ಹೀಗೆ ನಿನಗೆ ಮಹತ್ತಾದ ಫಲವಾಗುವುದು." ಎಂದನು

ವಿಶಾಖಾ ಆ ಸ್ಥಳವನ್ನು ಲಕ್ಷಿಸಿರಲಿಲ್ಲ.

ವಿಶಾಖಾ ನಾಲ್ಕು ತಿಂಗಳ ಕಾಲ ವಿಹಾರದೊಳಗಡೆ ಬುದ್ಧನೇ ಮೊದಲಾದ ಭಿಕ್ಷುಸಂಘಕ್ಕೆ ದಾನವನ್ನು ಕೊಟ್ಟಳು. ಕಡೆಯ ದಿವಸ ಭಿಕ್ಷುಸಂಘಕ್ಕೆ ಉಡುವ, ಹೊದೆಯುವ ವಸ್ತ್ರಗಳನ್ನು ಕೊಟ್ಟಳು.

ಸಂಘಕ್ಕೆ ಹೊಸದಾಗಿ ಬಂದವರಿಗೆ ಕೊಟ್ಟ ವಸ್ತ್ರದ ಬೆಲೆಯೇ ಒಂದೊಂದು ಸಾವಿರ. ಎಲ್ಲರ ಪಾತ್ರೆಗಳನ್ನೂ ತುಂಬಿ, ಭೈಷಜ್ಯವನ್ನು ಕೊಟ್ಟಳು. ದಾನಕ್ಕಾಗಿ ಆಕೆ ವ್ಯಯ ಮಾಡಿದುದು ಒಂಬತ್ತು ಕೋಟಿ ಆಯಿತು.

ಹೀಗೆ, ವಿಹಾರದ ಭೂಮಿಗಾಗಿ ಒಂಬತ್ತು ಕೋಟಿ, ಕಟ್ಟಡದ ಕೆಲಸಕ್ಕಾಗಿ ಒಂಬತ್ತು ಕೋಟಿ, ದಾನಾದಿಗಳಿಗೆ ಒಂಬತ್ತು ಕೋಟಿ— ಒಟ್ಟು ಇಪ್ಪತ್ತೇಳು ಕೋಟಿಗಳನ್ನು ಬುದ್ಧಶಾಸನಕ್ಕಾಗಿ ವ್ಯಯಮಾಡಿದಳು.

ಹೆಂಗುಸಾಗಿ ಇದ್ದು, ಮಿಥ್ಯಾದೃಷ್ಟಿಯುವರ ಮನೆಯಲ್ಲಿ ವಾಸ ಮಾಡಿಯೂ, ಧರ್ಮಕ್ಕಾಗಿ ಹೀಗೆ ಪರಿತ್ಯಾಗ ಮಾಡಿದವರು ಬೇರೆ ಇನ್ನೊಬ್ಬರಿಲ್ಲ.

ವಿಹಾರವನ್ನು ಕಟ್ಟಿ ಮುಗಿಸಿ, ಅದನ್ನು ದಾನಮಾಡಿದ ಮಹೋತ್ಸವ ನಡೆಯುತ್ತಿರುವಾಗ, ಒಂದು ದಿನ ಸಂಜೆಯ ನೆರಳು ಬೆಳೆಯುತ್ತಿದ್ದ ಹೊತ್ತಿನಲ್ಲಿ, ವಿಶಾಖಾ ತನ್ನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಇವರೊಡನೆ ಪ್ರಾಸಾದದ ಸುತ್ತಲೂ ಸುತ್ತಿಬರುತ್ತ, ಮಧುರವಾದ ಶಬ್ದದಿಂದ, ಈ ಅರ್ಥ ಬರುವಂತೆ, ತನ್ನ ಸಂತೋಷವನ್ನು ಹಾಡಿಕೊಂಡಳು:

"ಸುಣ್ಣ ಮಣ್ಣುಗಳನ್ನು ಬಳಿದು ರಮ್ಯವಾದ ಪ್ರಾಸಾದವನ್ನು ಕಟ್ಟಿಸಿ, ವಿಹಾರದಾನ ಎಂದಿಗೆ ಮಾಡಿಯೇನೋ, ಎಂದಿದ್ದೆ. ನನ್ನ ಸಂಕಲ್ಪ ನೇರವೇರಿತು.

"ಮಂಚಗಳನ್ನೂ ಪೀಠಗಳನ್ನೂ ಚಾಪೆಗಳನ್ನೂ ದಿಂಬುಗಳನ್ನೂ ಎಂದಿಗೆ ದಾನಮಾಡಿಯೇನೋ, ಎಂದಿದ್ದೆ. ನನ್ನ ಸಂಕಲ್ಪ ನೆರವೇರಿತು.

"ಶುಚಿಯಾದ ಆಹಾರವನ್ನು ಎಂದಿಗೆ ದಾನಮಾಡಿಯೇನೋ, ಎಂದಿದ್ದೆ. ನನ್ನ ಸಂಕಲ್ಪ ನೆರವೇರಿತು.

"ಭಿಕ್ಷುಗಳಿಗೆ ಉಡುವುದಕ್ಕೂ ಹೊದೆಯುವುದಕ್ಕೂ ಬೇಕಾದ ವಿಧ ವಿಧದ ವಸ್ತ್ರಗಳನ್ನು ಎಂದಿಗೆ ದಾನಮಾಡಿಯೇನೋ, ಎಂದಿದ್ದೆ. ನನ್ನ ಸಂಕಲ್ಪ ನೆರವೇರಿತು.

"ತುಪ್ಪ, ಬೆಣ್ಣೆ, ಜೇನು, ಎಣ್ಣೆ, ಬೆಲ್ಲ ಮತ್ತು ಔಷಧದ ವಸ್ತು

ಗಳನ್ನು ಎಂದಿಗೆ ದಾನಮಾಡಿಯೇನೋ, ಎಂದಿದ್ದೆ. ನನ್ನ ಸಂಕಲ್ಪ ನೆರವೇರಿತು."

ಭಿಕ್ಷುಗಳು ಆಕೆಯ ಧ್ವನಿಯನ್ನು ಕೇಳಿ, ಗುರುವಿಗೆ ತಿಳಿಯಪಡಿಸಿದರು: "ಭಗವನ್, ಇಷ್ಟೊಂದು ಕಾಲದಲ್ಲಿ ವಿಶಾಖಾ ಗಾನಮಾಡುವಳು ಎಂಬುದನ್ನು ನಾವು ಹಿಂದೆ ಕಂಡದ್ದಿಲ್ಲ. ಆಕೆ ಇಂದು ತನ್ನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳೊಡನೆ ಗಾನಮಾಡುತ್ತಾ ಪ್ರಾಸಾದದ ಸುತ್ತ ಸುತ್ತುತ್ತಿದ್ದಾಳೆ. ಇದೇನು, ಆಕೆಗೆ ಪಿತ್ತ ಪ್ರಕೋಪವಾಗಿದೆಯೊ? ಅಥವಾ ಹುಚ್ಚು ಹಿಡಿದಿದೆಯೊ?"

ಗುರು ಹೇಳಿದನು: "ಇಲ್ಲ, ಭಿಕ್ಷುಗಳೆ. ನನ್ನ ಮಗಳು ಗಾಯನ ಮಾಡುತ್ತಿಲ್ಲ. ಆಕೆಯ ಅಭೀಷ್ಟ ಪರಿಪೂರ್ಣವಾಗಿದೆ. 'ನಾನು ಮಾಡಿಕೊಂಡಿದ್ದ ಪ್ರಾರ್ಥನೆ ನೆರವೇರಿತು' ಎಂದು ಸಂತೋಷಗೊಂಡು, ತನ್ನ ಸಂತೃಪ್ತಿಯನ್ನು ಹೇಳಿಕೊಳ್ಳುತ್ತಿದ್ದಾಳೆ."

"ಆಕೆ ಪ್ರಾರ್ಥನೆ ಮಾಡಿಕೊಂಡದ್ದು ಯಾವಾಗ, ಭಗವನ್?"

"ಕೇಳುವಿರ, ಭಿಕ್ಷುಗಳೆ?"

"ಕೇಳುತ್ತೇವೆ, ಭಗವನ್."

ಭಿಕ್ಷುಗಳು ಹೀಗೆನ್ನಲು ಭಗವಂತನು ಹಿಂದಿನದನ್ನು ಹೇಳಿದನು.

— ೮ —

ಭಿಕ್ಷುಗಳೆ, ನೂರು ಸಾವಿರ ಕಲ್ಪಗಳ ಹಿಂದೆ, ಪದ್ಮೋತ್ತರನೆಂಬ ಬುದ್ಧನು ಲೋಕದಲ್ಲಿ ಹುಟ್ಟಿದನು. ಆತನಿಗೆ ನೂರುಸಾವಿರ ವರ್ಷ ಆಯುಸ್ಸು, ಆಸ್ರವಗಳನ್ನು ಕ್ಷಯಮಾಡಿದಂಥವರ ಪರಿವಾರ ಒಂದು ನೂರುಸಾವಿರ. ಆತನ ಊರು ಹಂಸವತೀ, ತಂದೆ ಸುನಂದನೆಂಬ ರಾಜ, ತಾಯಿ ಸುಜಾತಾ ಎಂಬವಳು.

ಆತನ ಉಪಾಸಿಕೆಯರಲ್ಲಿ ಮುಖ್ಯಳಾದವಳು ಗುರುವಿನಿಂದ ಎಂಟು ವರಗಳನ್ನು ಬೇಡಿ, ಆತನಿಗೆ ಮಾತೃಸ್ಥಾನದಲ್ಲಿ ಇದ್ದು, ಗುರುವಿಗೆ

ಬೇಕಾದ ಆಹಾರ ಅಭಯ ವಿಹಾರ ಭೈಷಜ್ಯಗಳನ್ನು ಒದಗಿಸಿ, ಸಂಜೆಯೂ ಹಗಲೂ ಪರಿಚರ್ಯೆ ಮಾಡಿದಳು.

ಆಕೆಗೆ ಒಬ್ಬಳು ಗೆಳತಿ. ಆಕೆಯೂ ಅವಳ ಸಂಗಡಲೇ ವಿಹಾರಕ್ಕೆ ಹೋಗುವಳು. ಆ ಉಪಾಸಿಕೆಯು ಗುರುವಿನ ಸಂಗಡ ವಿಶ್ವಾಸದಿಂದ ಮಾತನಾಡುವುದನ್ನೂ ಆಪ್ತವಾಗಿರುವುದನ್ನೂ ಆ ಗೆಳತಿ ಕಂಡು, "ಏನು ಮಾಡಿದರೆ, ನಾನೂ ಹೀಗೆ ಬುದ್ಧರ ವಿಶ್ವಾಸಕ್ಕೆ ಪಾತ್ರಳಾಗಿ ಆಪ್ತಳಾಗ ಬಹುದು?" ಎಂದು ಚಿಂತಿಸಿ, ಗುರುವನ್ನು ಪ್ರಶ್ನಿಸಿದಳು:

"ಭಗವನ್, ಈ ಸ್ತ್ರೀ ತಮಗೆ ಏನಾಗಬೇಕು?"

"ನನ್ನ ಉಪಾಸಿಕೆಯಾಗಿ, ನನಗೆ ಬೇಕಾದ ಆಹಾರ ಅಭಯ ವಿಹಾರ ಭೈಷಜ್ಯಗಳನ್ನು ಒದಗಿಸುವವರಲ್ಲಿ ಈಕೆ ಮುಖ್ಯಳಾದವಳು."

"ಈ ಮುಖ್ಯ ಪದವಿಯನ್ನು ಪಡೆಯಬೇಕಾದರೆ, ಏನು ಮಾಡ ಬೇಕು, ಭಗವನ್?"

"ನೂರು ಸಹಸ್ರ ಕಲ್ಪಗಳು ಅದಕ್ಕಾಗಿ ಪ್ರಾರ್ಥನೆ ಮಾಡಬೇಕು."

"ಈಗ ಪ್ರಾರ್ಥನೆ ಮಾಡಿಕೊಂಡು, ಅದನ್ನು ಪಡೆಯಲು ಶಕ್ಯವೆ, ಭಗವನ್?"

"ಹೌದು, ಶಕ್ಯ."

"ಹಾಗಾದರೆ, ಭಗವನ್, ನಿಮ್ಮ ನೂರು ಸಾವಿರ ಭಿಕ್ಷುಗಳೊಡನೆ ಏಳು ಹಗಲು ನಮ್ಮಲ್ಲಿ ಭಿಕ್ಷೆಯನ್ನು ಕೈಕೊಳ್ಳಿರಿ."

ಗುರು ಸಮ್ಮತಿಸಿದನು.

ಆಕೆ ಏಳು ಹಗಲು ದಾನ ಕೊಟ್ಟು, ಕಡೆಯ ದಿವಸ ಉಡಲೂ ಹೊದೆಯಲೂ ವಸ್ತ್ರಗಳನ್ನು ಕೊಟ್ಟು, ಗುರುವಿಗೆ ವಂದಿಸಿ, ಪಾದಮೂಲ ದಲ್ಲಿ ಬಿದ್ದು, "ಭಗವನ್, ಈ ದಾನದಿಂದ, ಇದರ ಫಲವಾಗಿ ನಾನು ದೇವೈಶ್ವರ್ಯ ಮೊದಲಾದ್ದನ್ನು ಪ್ರಾರ್ಥಿಸುತ್ತಿಲ್ಲ. ನಿನ್ನಂತಹ ಒಬ್ಬ ಬುದ್ಧನ ಬಳಿ ಎಂಟು ವರಗಳನ್ನು ಪಡೆದು, ಆತನಿಗೆ ಮಾತೃಸ್ಥಾನದಲ್ಲಿ ಇದ್ದು, ಆತನಿಗೆ ಬೇಕಾಗುವ ಆಹಾರ ಅಭಯ ವಿಹಾರ ಭೈಷಜ್ಯಗಳನ್ನು ಒದಗಿಸಲು ಸಮರ್ಥಳಾದ ಅಗ್ರ ಉಪಾಸಿಕೆಯಾಗಬೇಕು ಎಂಬುದೊಂದೇ ನನ್ನ ಪ್ರಾರ್ಥನೆ." ಎಂದಳು.

ಗುರು "ಈಕೆಯು ಪ್ರಾರ್ಥನೆ ಈಡೇರುವುದೋ?" ಎಂದು ಮುಂದಾಗುವುದನ್ನು ತಿಳಿಯಲು ನೂರು ಸಾವಿರ ಕಲ್ಪಗಳನ್ನು ಅವಲೋಕಿಸಿ, "ನೂರು ಸಾವಿರ ಕಲ್ಪಗಳ ಅನಂತರ ಗೌತಮನೆಂಬ ಬುದ್ಧನು ಉದಯಿಸುತ್ತಾನೆ. ಆಗ ನೀನು ವಿಶಾಖಾ ಎಂದು ಹೆಸರಾಗಿ, ಆತನ ಬಳಿಯಲ್ಲಿ ಎಂಟು ವರಗಳನ್ನು ಪಡೆದು, ಆತನಿಗೆ ಮಾತೃಸ್ಥಾನದಲ್ಲಿ ಇದ್ದು, ಆತನಿಗೆ ಬೇಕಾದ ಆಹಾರ ಅಭಯ ವಿಹಾರ ಭೈಷಜ್ಯಗಳನ್ನು ಒದಗಿಸಿ, ಆತನ ಉಪಾಸಿಕೆಯರಲ್ಲಿ ಅಗ್ರಳೆಂದು ಆಗುವೆ." ಎಂದನು.

ಆದರಿಂದ ಆಕೆ ತಾನು ಪ್ರಾರ್ಥಿಸಿದ್ದನ್ನು ತಾನು ಪಡೆಯುವಂತಾಯಿತು. ಆಕೆ ತಾನು ಬದುಕಿರುವವರೆಗೂ ಪುಣ್ಯಗಳನ್ನು ಮಾಡಿ, ಅಲ್ಲಿಂದ ಚ್ಯುತಿಹೊಂದಿ ದೇವಲೋಕದಲ್ಲಿ ಹುಟ್ಟಿ, ದೇವಮನುಷ್ಯರ ಸಂಸಾರದಲ್ಲಿ ಓಡಿಯಾಡಿದಳು. ಕಶ್ಯಪನೆಂಬ ಸಮ್ಯಕ್ ಸಂಬುದ್ಧನ ಕಾಲದಲ್ಲಿ, ಕಿಕಿ ಎಂಬ ಕಾಶೀರಾಜನ ಏಳು ಜನ ಹೆಣ್ಣುಮಕ್ಕಳಲ್ಲಿ ಕಡೆಯವಳಾಗಿ, ಸಂಘದಾಸಿ ಎಂದು ಹೆಸರಾದಳು. ಮದುವೆಯಾಗಿ ಪತಿಗೃಹಕ್ಕೆ ಹೋದಾಗಲೂ ತನ್ನ ಅಕ್ಕಂದಿರೊಡನೆ ಅನೇಕ ಕಾಲ ದಾನವೇ ಮೊದಲಾದ ಪುಣ್ಯಗಳನ್ನು ಮಾಡುತ್ತ ಇದ್ದಳು.

ಒಂದು ದಿನ ಸಮ್ಯಕ್ ಸಂಬುದ್ಧನಾದ ಕಶ್ಯಪನ ಪಾದಗಳಿಗೆ ಬಿದ್ದು, "ಮುಂದೆ ಎಂದಾದರೂ ನಿನ್ನಂತಹ ಬುದ್ಧನಿಗೆ ಮಾತೃಸ್ಥಾನದಲ್ಲಿ ಇದ್ದು, ಆತನಿಗೆ ಬೇಕಾಗುವ ಆಹಾರ ಅಭಯ ವಿಹಾರ ಭೈಷಜ್ಯಗಳನ್ನು ಒದಗಿಸುವ ಉಪಾಸಿಕೆಯರಲ್ಲಿ ನಾನು ಮೊದಲಿನವಳಾಗಲಿ". ಎಂದು ಪ್ರಾರ್ಥನೆ ಮಾಡಿಕೊಂಡಳು.

ಅಲ್ಲಿಂದ ಮತ್ತೆ ದೇವ ಮನುಷ್ಯರುಗಳ ಸಂಸಾರದಲ್ಲಿ ಓಡಿಯಾಡುತ್ತ, ಈ ಜನ್ಮದಲ್ಲಿ ಮೆಂಡಕಶ್ರೇಷ್ಠಿಯ ಮಗನಾದ ಧನಂಜಯಶ್ರೇಷ್ಠಿಗೆ ಮಗಳಾಗಿ ಹುಟ್ಟಿ, ನನ್ನ ಶಾಸನದಲ್ಲಿ ಬಹುವಾದ ಪುಣ್ಯಗಳನ್ನು ಮಾಡಿದ್ದಾಳೆ.

ಹೀಗೆ, ಭಿಕ್ಷುಗಳೆ, ನನ್ನ ಮಗಳು ಗಾಯನ ಮಾಡುತ್ತಿಲ್ಲ, ಮಾಡಿಕೊಂಡ ಪ್ರಾರ್ಥನೆ ಈಡೇರಿತೆಂದು ಸಂತೋಷವನ್ನು ಹೇಳಿಕೊಳ್ಳುತ್ತಿದ್ದಾಳೆ.

—ಎಂದು ಹೇಳಿ, ಭಗವಂತನು ಹೀಗೆಂದನು :

“ಭಿಕ್ಷುಗಳೆ, ಕುಶಲಿಯಾದ ಮಾಲೆಗಾರನು ನಾನಾ ಪುಷ್ಪಗಳ ಮಹತ್ತಾದ ರಾಶಿಯಿಂದ ನಾನಾ ಪ್ರಕಾರವಾದ ಮಾಲೆಗಳನ್ನು ಹೇಗೆ ಮಾಡುವನೋ ಹಾಗೆ, ವಿಶಾಖೆ ನಾನಾ ಪ್ರಕಾರವಾದ ಕುಶಲಗಳನ್ನು ಮಾಡುವುದಕ್ಕಾಗಿ ತನ್ನ ಚಿತ್ತವನ್ನು ಬಗ್ಗಿಸುತ್ತಾಳೆ.”

# ಪ್ರಶ್ನೋತ್ತರದ ವೇಳೆ

ಕಂ ಕಿಂ ಎನ್ನದೆ ಕಿವಿ ತೆರೆದು ಕಥೆ ಕೇಳುತ್ತಿದ್ದವರೆಲ್ಲ "ಕಥೆ ಸ್ವಲ್ಪ ಹಳೆಯ ಕಾಲದ್ದಾದರೂ ಇದರ ರುಚಿ ಮಾತ್ರ ನಮಗಂತೂ ಹೊಸದು." ಎಂದು ಒಪ್ಪಿಕೊಂಡರು. "ಈ ಕಥೆಯೊಳಗೆ ಇನ್ನೂ ಕೆಲವರು ಗಂಡಸರನ್ನೂ ಹೆಂಗಸರನ್ನೂ ಹೆಸರು ಹೇಳಿದೆ. ಮಧ್ಯೆ ಮಧ್ಯೆ ಒಂದೋ ಎರಡೋ ಯಾವುದೋ ಪೂರ್ವಕಥೆಗಳ ಸಂದರ್ಭವನ್ನೂ ಸೂಚಿಸಿಕೊಂಡು ಹೋದೆ. ಅವುಗಳನ್ನೂ ಕುರಿತು ಒಂದು ಸ್ವಲ್ಪ ನಮಗೆ ಪರಿಚಯ ಮಾಡಿಸಿದರೆ ಆಗಬಹುದಿತ್ತು. ಪ್ರಾಚೀನ ಕಾಲದ ಇತಿಹಾಸವನ್ನೂ ಸಂಸ್ಕೃತಿಯನ್ನೂ ಜನಜೀವನವನ್ನೂ ಸ್ವಲ್ಪ ತಿಳಿದುಕೊಂಡ ಹಾಗೆ ಆಗುತ್ತಿತ್ತು." ಎಂದು ಕೇಳಿಕೊಂಡರು.

"ಓ, ಆಗಬಹುದು. ಕಥೆ ಕೇಳಿದವರು ನೀವು, ನಿಮಗೆ ಯಾವುದನ್ನು ಕೇಳಬೇಕೆಂದು ಕುತೂಹಲ ತೋರುವುದೋ ಅದನ್ನು ಕುರಿತು ಕೇಳಿರಿ. ನನಗೆ ಗೊತ್ತಿತ್ತೇ, ತಿಳಿದಷ್ಟು ತಿಳಿಸುತ್ತೇನೆ; ಗೊತ್ತಿಲ್ಲದೆ ಹೋಯಿತೇ, ಗೊತ್ತಿಲ್ಲವೆಂದು ಎರಡು ಕೈಯಲ್ಲೂ ತಾರಮ್ಮಯ್ಯ ಆಡಿಸುತ್ತೇನೆ."

ಅನಂತರ ಒಬ್ಬೊಬ್ಬರಾಗಿ ಪ್ರಶ್ನೆ ಕೇಳಿದರು. ಅದಕ್ಕೆ ಕಿಟ್ಟಿ ತನಗೆ ತಿಳಿದಿದ್ದ ಉತ್ತರ ಹೇಳಿದ.

— ೧ —

"ಈ ವಿಶಾಖೆಯ ಅಜ್ಜ, ಅಜ್ಜಿ, ತಂದೆ, ತಾಯಿ ಅಲ್ಲದೆ ಅವರ ಮನೆಯ ಒಬ್ಬ ದಾಸ—ಈ ಐವರೂ ಮಹಾ ಪುಣ್ಯವಂತರು ಎಂದು ಹೇಳಿದೆಯಲ್ಲ. ಇವರು ಪುಣ್ಯವಂತರೆಂಬುದು ಹೇಗೆ ವ್ಯಕ್ತವಾಯಿತು?"

"ಓ, ಅದೇ? ಅದರದೊಂದು ಕಥೆ. ಕೇಳಿ."

ಮೆಂಡಕಶ್ರೇಷ್ಠಿ ತಾನು ಸ್ನಾನಮಾಡಿ ಮಡಿಯಾಗಿ ತನ್ನ ಕಣಜದ ಬಾಗಿಲಲ್ಲಿ ಹೋಗಿ ನಿಂತರೆ, ತನ್ನಷ್ಟಕ್ಕೆ ತಾನೆ ಆಕಾಶದಿಂದ ಕಾಳುಗಳ ಮಳೆ ಸುರಿದು, ಕಣಜ ತುಂಬಿಹೋಗುತ್ತಿತ್ತು. ಇದು ಮೆಂಡಕನ ಪುಣ್ಯದ ಪ್ರಭಾವ.

ಆತನ ಪತ್ನಿಯಾದ ಚಂದ್ರಪದ್ಮಾದೇವಿ, ಒಂದು ಪಾತ್ರೆ ಅನ್ನ ವನ್ನು ಪಕ್ವಮಾಡಿ, ಸವುಟು ಹಿಡಿದು ಬಡಿಸುವಳು. ಆಕೆ ಎಷ್ಟೇ ಬಡಿಸಿದರೂ, ಎಷ್ಟೇ ಜನ ಊಟಕ್ಕೆ ಬಂದರೂ, ಪಾತ್ರೆಯಲ್ಲಿ ಅನ್ನ ಅಕ್ಷಯವಾಗಿರುತ್ತಿತ್ತು. ಇದು ಚಂದ್ರಪದ್ಮಾದೇವಿಯ ಪುಣ್ಯದ ಪ್ರಭಾವ.

ಮೆಂಡಕನ ಮಗನಾದ ಧನಂಜಯಶ್ರೇಷ್ಠಿ, ಬೆಳಗ್ಗೆ ಏಳುವಾಗ ಚೀಲದಲ್ಲಿ ಒಂದು ಸಾವಿರ ನಾಣ್ಯಗಳನ್ನು ತುಂಬಿಕೊಂಡು, ಬೇಡಿದವರಿಗೆ ಅವರು ಬೇಡಿದಷ್ಟನ್ನು ದಾನಮಾಡುತ್ತಿದ್ದನು; ಆದರೂ, ಸಂಜೆಯ ಹೊತ್ತಿಗೆ ಆ ಚೀಲ ಬೆಳಗ್ಗೆ ಇದ್ದಂತೆಯೇ ತುಂಬಿರುತ್ತಿತ್ತು. ಇದು ಧನಂಜಯಶ್ರೇಷ್ಠಿಯ ಪುಣ್ಯದ ಪ್ರಭಾವ.

ಮೆಂಡಕನ ಸೊಸೆಯಾದ ಸುಮನಾದೇವಿಯಾದರೂ ಹಾಗೇ: ಆಳು ಕಾಳುಗಳಿಗೆ ಪಡಿಯಳೆದು ಕೊಡುವುದಕ್ಕಾಗಿ ಕುಕ್ಕೆಯ ತುಂಬ ಬತ್ತವನ್ನು ತುಂಬಿಕೊಂಡು, ಅದನ್ನು ಅವರಿಗೆಲ್ಲ ಆರಾರು ತಿಂಗಳಿಗೆ ಸಾಕಾಗುವಷ್ಟು ಅಳೆದುಕೊಟ್ಟರೂ, ಕುಕ್ಕೆಯ ಬತ್ತ ಕೊಂಚವೂ ಕಡಮೆಯಾಗುತ್ತಿರಲಿಲ್ಲ. ಇದು ಸುಮನಾದೇವಿಯ ಪುಣ್ಯದ ಪ್ರಭಾವ.

ಮೆಂಡಕನ ಮನೆಯ ದಾಸನಾದ ಪೂರ್ಣಕನು ಉಳುವುದಕ್ಕೆ ಹೋಗುವಾಗ ಚಿನ್ನದ ನೇಗಿಲನ್ನು ಹಿಡಿದು ಹೋಗುತ್ತಿದ್ದನು. ಆ ಒಂದು ನೇಗಿಲಿನಿಂದ ಉತ್ತು, ನೆಲದಲ್ಲಿ ಒಂದು ನೇಗಿಲುಸಾಲು ಆದರೆ, ಅದರ ಪಕ್ಕದಲ್ಲಿ ಈಚೆ ಮೂರು ಆಚೆ ಮೂರು ನೇಗಿಲುಸಾಲು ತಮ್ಮಿಂದ ತಾವೇ ಆಗುತ್ತಿದ್ದುವು. ಇದು ಪೂರ್ಣಕನ ಪುಣ್ಯದ ಪ್ರಭಾವ.

ಹೀಗೆ ಆ ಐದು ಜನವೂ ಒಂದು ಹಿಡಿದರೆ, ಅದು ಹತ್ತಾಗುತ್ತಿತ್ತು. ಅದು ಅವರವರ ಪುಣ್ಯದ ಪ್ರಭಾವ.

ಒಂದು ಸಲ, ಬಿಂಬಿಸಾರ ರಾಜನು, ಅವರ ಈ ಪುಣ್ಯದ ಪ್ರಭಾವದ ಅದ್ಭುತವಾದ ಕಥೆಗಳನ್ನು ಕೇಳಿ, ಅದನ್ನು ಪರೀಕ್ಷಿಸಿ ಬಾ, ಎಂದು

ತನ್ನ ಮಂತ್ರಿಯನ್ನು ಕಳುಹಿಸಿದನು. ಮಂತ್ರಿ ಆ ಅದ್ಭುತಗಳನ್ನು ಕಣ್ಣಾರೆ ಕಂಡು ಬಂದು ತಿಳಿಸಿದನು. ರಾಜನು ಆಶ್ಚರ್ಯಪಟ್ಟು ಹೋದನು.

ಪುಣ್ಯವಂತನಾದ ಮೆಂಡಕನಿಗೆ ಬುದ್ಧಗುರುವಿನಲ್ಲಿ ಅಪಾರವಾದ ಭಕ್ತಿ. ಬುದ್ಧನು ಭದ್ರಿಕನಗರಕ್ಕೆ ಬಂದಾಗ ಮೆಂಡಕನು ವಿಶಾಖೆಯ ಮೂಲಕ ಬುದ್ಧನಿಗೆ ಸತ್ಕಾರಮಾಡಿಸಿದ್ದನ್ನು ಕೇಳಿದ್ದೀರಿ. ಬುದ್ಧನು ಭದ್ರಿಕ ನಗರದಿಂದ ಪ್ರಯಾಣ ಹೊರಟಾಗಲೂ ಅಷ್ಟೇ: ಬೇಕುಬೇಕಾದ ಆಹಾರ ಪದಾರ್ಥಗಳನ್ನೂ ಹಾಲುಮೊಸರುಗಳನ್ನೂ ಬಂಡಿಗಳಲ್ಲಿ ತುಂಬಿ ಕೊಂಡು, ಬುದ್ಧನ ಭಿಕ್ಷುಸಂಘದ ಹಿಂದೆಯೇ ಹೋಗಿ, ಅವರನ್ನು ತೃಪ್ತಿಪಡಿಸಿ ಹಿಂದಿರುಗಿದನು.

ಮೇಂಡಕ ಎಂಬುದು ಏನೋ ವಿಚಿತ್ರವಾದ ಹೆಸರು ಎಂದು ನಿಮಗೆ ಎನ್ನಿಸಬಹುದು. ಮೆಂಡಕ ಎಂದರೆ, ಟಗರು ಎಂದು ಅರ್ಥ. ಅವನ ಮನೆಯ ಹಿಂದಿನ ಬಯಲಿನಲ್ಲಿ ಎರಡು ಚಿನ್ನದ ಬಣ್ಣದ ಟಗರುಗಳಿದ್ದುವಂತೆ. ಮೆಂಡಕ ತನಗೆ ಏನಾದರೂ ಆಹಾರವೋ ವಸ್ತ್ರವೋ ದ್ರವ್ಯವೋ ಬೇಕಾದರೆ, ಆ ಟಗರುಗಳ ಬಾಯಲ್ಲಿ ಬಣ್ಣದ ದಾರದ ಉಂಡೆಗಳನ್ನು ಇರಿಸುವನಂತೆ; ಆ ದಾರವನ್ನು ಹೊರಗೆಳೆದರೆ, ಅವನಿಗೆ ಬೇಕಾದದ್ದು ಅದರ ಹಿಂದೆಯೇ ಬರುವುದಂತೆ.

ಇಷ್ಟೆಲ್ಲಾ ಅದ್ಭುತವ್ಯಾಪಾರದ ಸಾಮರ್ಥ್ಯ ಅವನಿಗೆ ಹೇಗೆ ಸಂಪಾದನೆಯಾಯಿತು? ಅವನು ತನ್ನ ಹಿಂದಿನ ಜನ್ಮಗಳಲ್ಲಿ ಮಾಡಿದ ಪುಣ್ಯದ ಫಲವಾಗಿ, ಎನ್ನುತ್ತಾರೆ.

ಹಿಂದೆ, ವಿಪಶ್ಯಿನ್ ಎಂಬ ಬುದ್ಧನ ಕಾಲದಲ್ಲಿ, ಮೆಂಡಕನು ಅವರೋಜ ಎಂಬ ಗೃಹಸ್ಥನಾಗಿದ್ದನು. ಅವನ ಸೋದರಮಾವನು ಒಂದು ಸಲ ಬುದ್ಧನ ವಾಸಕ್ಕಾಗಿ ಒಂದು ಗಂಧಕುಟಿಯನ್ನು ಕಟ್ಟತೊಡಗಿದನು. ಅವರೋಜನು ಆ ಕಾರ್ಯದಲ್ಲಿ ತಾನೂ ಸಹಾಯ ಮಾಡುವೆನೆಂದರೆ, ಅವನ ಮಾವ ಒಪ್ಪಲಿಲ್ಲ. ಆದ್ದರಿಂದ ಅವರೋಜನು ತಾನೇ ಪ್ರತ್ಯೇಕವಾಗಿ, ತನ್ನ ಮಾವನು ಕಟ್ಟಿಸಿದ ಗಂಧಕುಟಿಯ ಎದುರಿಗೆ ಒಂದು ಗಜಶಾಲೆಯನ್ನು ಕಟ್ಟಿಸಿದನು. ಅದರ ಅಂಗಳದ ಮಧ್ಯೆ ಒಂದು ರತ್ನ

ಖಚಿತವಾದ ಮಂಟಪವನ್ನು ಮಾಡಿಸಿ, ಅದರ ನಡುವೆ ಉಪದೇಶಕ್ಕೆ ಕುಳಿತುಕೊಳ್ಳಲು ಅನುಕೂಲಮಾಡಿದನು. ನಾಲ್ಕು ಚಿನ್ನದ ಟಗರು ಗಳು ಹೊತ್ತ ಪಾದಪೀಠವೊಂದನ್ನು ಮಾಡಿಸಿದನು. ಆ ಗಜಶಾಲೆ ಯನ್ನು ಬುದ್ಧನಿಗೆ ಸಮರ್ಪಿಸುವ ಉತ್ಸವದ ಸಂದರ್ಭದಲ್ಲಿ, ನಾಲ್ಕು ತಿಂಗಳು ಕಾಲ, ಅರುವತ್ತೆಂಟುನೂರುಸಾವಿರ ಭಿಕ್ಷುಗಳಿಗೆ ಆಹಾರ ದಾನ ಮಾಡಿ, ಒಬ್ಬೊಬ್ಬರಿಗೂ ಮೂರು ಮೂರು ವಸ್ತ್ರಗಳನ್ನು ಒಪ್ಪಿಸಿ ದನು. ಹೊಸದಾಗಿ ಶ್ರಮಣರಾದವರಿಗೆ ಕೊಟ್ಟ ವಸ್ತ್ರಗಳ ಬೆಲೆಯೇ ಒಂದು ನೂರು ಸಾವಿರದಷ್ಟಾಯಿತು. ಆವರ್ರೀಜನು ಮತ್ತೆ ಅನೇಕ ಜನ್ಮಗಳು ಕಳೆದ ಮೇಲೆ, ಬುದ್ಧಗುರುವಿನ ಕಾಲದಲ್ಲಿ ವಾರಾಣಸೀ ನಗರ ದಲ್ಲಿ ಶ್ರೇಷ್ಠಿಯಾಗಿ ಜನ್ಮ ತಾಳಿದನು.

ಒಂದು ದಿನ ಅರಮನೆಗೆ ಹೋಗುತ್ತಿರುವಾಗ, ಮಾರ್ಗದಲ್ಲಿ ರಾಜ ಪುರೋಹಿತನನ್ನು ಕಂಡು, ಮುಂದೆ ಮೂರು ತಿಂಗಳ ಕಾಲ ಘೋರ ಕ್ಷಾಮ ಪ್ರಾಪ್ತವಾಗುವುದನ್ನು ತಿಳಿದನು. ಮೊದಲೇ ಎಚ್ಚರಿಕೆಯನ್ನು ಪಡೆದಿದ್ದನಾದ್ದರಿಂದ, ತನಗೆ ಕೊಂಡುಕೊಳ್ಳಲು ದೊರಕುವ ಕಾಳು ಕಡ್ಡಿಯನ್ನೆಲ್ಲಾ ಮೊದಲೇ ಕೊಂಡುಕೊಂಡು. ಉಗ್ರಾಣದಲ್ಲಿ ತುಂಬಿ ಕೊಂಡನು. ಕ್ಷಾಮ ಬಂತು; ಶ್ರೇಷ್ಠಿಯೂ ಅವನ ಮನೆಯ ಪರಿವಾರ ವೆಲ್ಲವೂ ತಾವು ಸಂಗ್ರಹಿಸಿದ್ದನ್ನು ತಿಂದರು. ಅದು ತಾನೆ ಎಷ್ಟು ದಿವಸ ತಡೆದೀತು? ಬೇಗ ಮುಗಿದುಹೋಯಿತು. ಪರಿವಾರದವರಲ್ಲಿ ಅನೇಕರು, ಅವನ ಮಾತಿನ ಪ್ರಕಾರ, ಗೆಡ್ಡೆ ಗೆಣಸುಗಳನ್ನು ಹುಡುಕಿ ಕೊಂಡು ಬೆಟ್ಟಗಳಿಗೆ ಹೋದರು. ಮೆಂಡಕ, ಅವನ ಹೆಂಡತಿ, ಮಗ, ಸೊಸೆ, ಒಬ್ಬ ದಾಸ—ಇಷ್ಟು ಜನ ಮಾತ್ರ ಅಲ್ಲೇ ಉಳಿದರು.

ಒಂದು ದಿನ ಚಂದ್ರಪದ್ಮಾದೇವಿ, ತಾನು ಕೈಗಾವಲಿಗೆ ಇರಿಸಿದ್ದ ಒಂದು ನಾಳಿ ಅಕ್ಕಿಯನ್ನು ಬೇಯಿಸಿ, ಅದನ್ನು ಐದಾಗಿ ಹಂಚಿದಳು. ಮನೆಯುವರೆಲ್ಲ ಕುಳಿತು, ಇನ್ನೇನು ತುತ್ತು ಎತ್ತಬೇಕು, ಅಷ್ಟುಹೊತ್ತಿಗೆ ಒಬ್ಬ ಪ್ರತ್ಯೇಕಬುದ್ಧನು ಅವರ ಮನೆಯ ಬಾಗಿಲಿಗೆ ಭಿಕ್ಷೆಗೆ ಬಂದನು. ಪ್ರತಿಯೊಬ್ಬರೂ ತಮ್ಮ ತಮ್ಮ ಪಾಲಿನದರಲ್ಲಿ ಇಷ್ಟಿಷ್ಟು ಅವನಿಗೆ ಕೊಟ್ಟು, ತಮತಮಗೆ ಬೇಕಾದುದನ್ನು ಬೇಡಿಕೊಂಡರು. ಹೀಗೆ ಬೇಡಿ

ಕೊಂಡದ್ದರ ಫಲವಾಗಿ, ಆ ಐವರಿಗೂ ಆ ಅದ್ಭುತವಾದ ಶಕ್ತಿಸಾಮರ್ಥ್ಯ ಬಂದದ್ದು.

ಆ ದಿನ ಮಧ್ಯಾಹ್ನ, ಪ್ರತ್ಯೇಕಬುದ್ಧನು ಭಿಕ್ಷೆಯನ್ನು ಸ್ವೀಕರಿಸಿ ಹೊರಟುಹೋದ ಮೇಲೆ, ಶ್ರೇಷ್ಠಿಗೆ ಹಸಿವಾಯಿತು. ಪಾತ್ರೆಯ ಅಡಿಯಲ್ಲಿ ಏನಾದರೂ ಅಗುಳು ಅಂಟಿಕೊಂಡಿದ್ದರೆ ನೋಡು, ಎಂದು ಪತ್ನಿಗೆ ಹೇಳಿದನು. ಆಕೆ ಹೋಗಿ ನೋಡಿದರೆ—ಪಾತ್ರೆಯ ತುಂಬ ಪರಿಮಳವಾದ ಶಾಲ್ಯನ್ನ ತುಂಬಿತ್ತು! ಅಂದಿನಿಂದ ಅವರ ಮನೆಯಲ್ಲಿ ಅನ್ನ ಅಕ್ಷಯವಾಯಿತು.

ಚಂದ್ರಪದ್ಮಾದೇವಿಗೆ ಎಡದ ಕೈಯಲ್ಲಿ ಪದ್ಮದ ಗುರುತೂ, ಬಲದ ಕೈಯಲ್ಲಿ ಚಂದ್ರನ ಗುರುತೂ ಇದ್ದಿತಂತೆ; ಹಾಗೆಯೇ ಎಡದ ಅಂಗಾಲಲ್ಲಿ ಒಂದು ಪದ್ಮ, ಬಲದ ಅಂಗಾಲಲ್ಲಿ ಒಂದು ಚಂದ್ರ, ಗುರುತು ಇದ್ದಿತಂತೆ. ಅದರಿಂದ ಆಕೆಗೆ ಚಂದ್ರಪದ್ಮಾ ಎಂದು ಹೆಸರಾಯಿತು.

— ೨ —

"ಈ ಮೆಂಡಕಶ್ರೇಷ್ಠಿಯ ಮನೆಯವರ ಪುಣ್ಯದ ಪ್ರಭಾವವನ್ನು ಬಿಂಬಿಸಾರ ರಾಜ ಪರೀಕ್ಷೆ ಮಾಡಿದ, ಎಂದೆಯಲ್ಲ. ಈ ರಾಜ ಎಂಥವನು? ಸ್ವಲ್ಪ ಹೇಳು, ಕೇಳೋಣ."

"ಬಿಂಬಿಸಾರನ ವೃತ್ತಾಂತ ಕೇಳಬೇಕಾದ್ದೆ. ಕೇಳಿ."

ಬಿಂಬಿಸಾರ ಮಗಧದ ರಾಜ. ಬುದ್ಧನಲ್ಲಿ ಆತನಿಗೆ ಅಪರಿಮಿತವಾದ ಭಕ್ತಿ, ಗೌರವ. ಆತನು ತನ್ನ ಹದಿನೈದನೆಯ ವರ್ಷದಲ್ಲಿ ಪಟ್ಟಕ್ಕೆ ಬಂದು, ಐವತ್ತೆರಡು ವರ್ಷಕಾಲ ರಾಜ್ಯವಾಳಿದನು. ಬುದ್ಧನಿಗಿಂತ ಐದು ವರ್ಷ ಚಿಕ್ಕವನು. ತಾನು ಪಟ್ಟಕ್ಕೆ ಬಂದು ಹದಿನೈದು ವರ್ಷಗಳಾದ ಮೇಲೆ, ಬುದ್ಧನ ಧರ್ಮವನ್ನು ಕೇಳಿ ಪ್ರಸನ್ನನಾದನು.

ಬುದ್ಧನ ತಂದೆಗೂ ಬಿಂಬಿಸಾರನ ತಂದೆಗೂ ಹಿಂದಿನಿಂದ ಸ್ನೇಹವಿದ್ದಿತಂತೆ. ಆದರೆ ಬಿಂಬಿಸಾರನು ಬುದ್ಧನನ್ನು ಮೊದಲ ಬಾರಿಗೆ

ಕಂಡದ್ದು, ಸಿದ್ಧಾರ್ಥನು ತನ್ನ ಹೆಂಡತಿ ಮಕ್ಕಳನ್ನು ತೊರೆದು ಮನೆ ಬಿಟ್ಟು ಹೊರಟ ತರುಣದಲ್ಲಿ, ರಾಜಗೃಹದ ಹೊರಗಿನ ಪಾಂಡವ ಪರ್ವತದ ಮೇಲೆ. ದೊರೆ ಆ ಯುವಕ ವಿರಾಗಿಯನ್ನು ಅರಮನೆಯ ಕಿಟಕಿಗಳ ಮೂಲಕವಾಗಿ ಕಂಡು, "ಈತನು ಯಾರು? ಎಲ್ಲಿಗೆ ಹೋಗುತ್ತಾನೆ? ತಿಳಿದು ಬನ್ನಿ." ಎಂದು ದೂತರನ್ನು ಕಳುಹಿಸಿದನು. ಆತನು ಪಾಂಡವ ಪರ್ವತದ ಮೇಲೆ ವಿಶ್ರಮಿಸಿಕೊಳ್ಳುತ್ತಿರುವನೆಂಬುದನ್ನು ತಿಳಿದು, ತಾನೇ ಅಲ್ಲಿಗೆ ಹೋದನು. "ಇಷ್ಟು ಚಿಕ್ಕವಯಸ್ಸಿನಲ್ಲಿಯೇ ಇಷ್ಟು ವಿರಕ್ತಿಯೇಕೆ? ನನ್ನ ರಾಜ್ಯವನ್ನೇ ನಿನಗೆ ಒಪ್ಪಿಸಿಕೊಡುತ್ತೇನೆ. ಇಲ್ಲೇ ಸುಖವಾಗಿ ನಿಲ್ಲು." ಎಂದನು. ಆಗ ಬುದ್ಧನು "ರಾಜನ್, ನಾನು ಶಾಕ್ಯರಾಜನಾದ ಶುದ್ಧೋದನನ ಮಗನು. ರಾಜ್ಯವನ್ನು ಪರಿತ್ಯಾಗಮಾಡಿ ಬಂದಿದ್ದೇನೆ. ಅಮೃತವನ್ನು ಹುಡುಕಿಕೊಂಡು ಹೊರಟಿದ್ದೇನೆ." ಎಂದು ತನ್ನ ಪರಿಚಯವನ್ನು ಹೇಳಿಕೊಂಡನು. "ನೀನು ಅಮೃತವನ್ನು ಕಂಡ ಮೇಲೆ ಮೊದಲು ಬಂದು ಅದನ್ನು ನನಗೆ ತಿಳಿಸಬೇಕು." ಎಂದು ಬಿಂಬಿಸಾರನು ಪ್ರಾರ್ಥಿಸಿದನು. ಸಿದ್ಧಾರ್ಥನು ಹಾಗೇ ಆಗಲೆಂದು ವಾಗ್ದಾನಮಾಡಿ, ಅಲ್ಲಿಂದ ತೆರಳಿದನು.

ಮುಂದೆ, ಸಿದ್ಧಾರ್ಥನು ಬೋಧಿಯನ್ನು ಸಾಕ್ಷಾತ್ಕಾರಮಾಡಿಕೊಂಡು ಸಮ್ಯಕ್ ಸಂಬುದ್ಧನಾದ ಮೇಲೆ, ಬಿಂಬಿಸಾರನಿಗೆ ತಾನು ಕೊಟ್ಟಿದ್ದ ವಚನದ ಪ್ರಕಾರ, ರಾಜಗೃಹಕ್ಕೆ ಬಂದನು. ಊರ ಹೊರಗಿನ ಉದ್ಯಾನವನದಲ್ಲಿ ತಂಗಿದನು. ಬಿಂಬಿಸಾರನು ಅಲ್ಲಿಗೆ ಹೋಗಿ, ಬುದ್ಧನನ್ನು ಸಂದರ್ಶಿಸಿದನು. ಆತನೂ ಆತನ ಪರಿವಾರದವರೂ ಬುದ್ಧನ ಧರ್ಮೋಪದೇಶವನ್ನು ಕೇಳಿ, ಸ್ರೋತಾಪನ್ನರಾದರು. ಮಾರನೇ ದಿವಸ ಬಿಂಬಿಸಾರನು ಬುದ್ಧನೇ ಮೊದಲಾದ ಭಿಕ್ಷುಸಂಘಕ್ಕೆ ಭಿಕ್ಷೆಯನ್ನು ನೀಡಿದನು.

ಅದೇ ದಿನವೇ, ಊಟ ಮುಗಿದು ಕೈ ತೊಳೆದುಕೊಂಡಮೇಲೆ, ಬಿಂಬಿಸಾರನು ಚಿನ್ನದ ಗಿಂಡಿಯಿಂದ ಬುದ್ಧನ ಕೈಮೇಲೆ ಧಾರೆಯೆರೆದು, ವೇಣುವನ ವೆಂಬ ಉದ್ಯಾನವನ್ನು ಭಿಕ್ಷುಸಂಘದ ಬಳಕೆಗಾಗಿ ದಾನಮಾಡಿದನು. "ಇದು ನಗರದಿಂದ ಅತಿ ದೂರವಲ್ಲ, ನಗರಕ್ಕೆ ಅತಿ ಸಮೀಪವೂ

ಅಲ್ಲ; ಭಗವಂತನು ಹೋಗಿ ಬರುವುದಕ್ಕೆ ಅನುಕೂಲವಾಗಿದೆ, ಜನಗಳಿಗೆ ಹತ್ತಿರವಾಗಿದೆ; ಹಗಲಿನಲ್ಲಿ ಜನಗಳ ನೂಕುನುಗ್ಗಲು ಇಲ್ಲ, ರಾತ್ರಿ ಯಾವ ಸದ್ದು ಗದ್ದಲಗಳೂ ಇಲ್ಲ; ನಿರ್ಮಲವಾಗಿದೆ, ನಿರ್ಜನವಾಗಿದೆ, ಏಕಾಂತ ವಾಗಿದೆ." ಎಂದು ಹೇಳಿ, ಆ ವೇಣುವನವನ್ನು ದಾನಮಾಡಿದನು.

**ಭಗವಂತನಾದ ಬುದ್ಧಗುರು ತನ್ನ ಭಿಕ್ಷುಸಂಘಕ್ಕಾಗಿ ತಾನು ಸ್ವೀಕರಿಸಿದ ಆರಾಮುಗಳಲ್ಲೆಲ್ಲಾ ಬಿಂಬಿಸಾರನು ದಾನಕೊಟ್ಟ ಈ ಆರಾಮುವೇ ಮೊತ್ತಮೊದಲನೆಯದು.**

ಮೂರನೆಯ ದಿನದಿಂದ ಭಗವಂತನು ವೇಣುವನದಲ್ಲಿಯೇ ಬೀಡು ಬಿಟ್ಟನು. ಅಲ್ಲಿ ಗುರು ಇದ್ದ ಆ ಕಾಲದಲ್ಲಿಯೇ ಸಾರಿಪುತ್ರ, ಮೌದ್ಗಲ್ಯಾಯನ ಎಂಬವರಿಬ್ಬರು ಬಂದು ಸಂಘವನ್ನು ಸೇರಿದ್ದು. ಇವರು ಮುಂದೆ ಬುದ್ಧನ ಶಿಷ್ಯರಲ್ಲೆಲ್ಲ ಪ್ರಧಾನರಾದವರು ಎನ್ನಿಸಿಕೊಂಡರು.

ಆ ವನದ ಸುತ್ತಲೂ ಬಿದಿರಿನ ಮೆಳೆಗಳು ಇದ್ದುದರಿಂದ ಅದಕ್ಕೆ ವೇಣುವನವೆಂದು ಹೆಸರು. ಅದರ ಸುತ್ತ ಹದಿನೆಂಟು ಹಸ್ತಗಳ ಎತ್ತರದ ಒಂದು ಗೋಡೆಯಿತ್ತು. ಹೋಗಿ ಬರುವುದಕ್ಕೆ ಒಂದು ಮಹಾ ಗೋಪುರ ದ್ವಾರವಿತ್ತು.

ಬುದ್ಧನ ಬದುಕಿನಲ್ಲಿ ಅನೇಕ ಮುಖ್ಯವಾದ ಘಟನೆಗಳು ನಡೆದದ್ದು ಈ ವೇಣುವನದಲ್ಲಿ. ಬುದ್ಧನು ತನ್ನ ಎರಡನೆಯ, ಮೂರನೆಯ, ನಾಲ್ಕನೆಯ ವರ್ಷಾವಾಸವನ್ನು, ಎಂದರೆ ಮಳೆಗಾಲದ ನಾಲ್ಕು ತಿಂಗಳನ್ನು, ಕಳೆದದ್ದು ಇಲ್ಲೇ ವೇಣುವನದಲ್ಲೇ. ತನ್ನ ಧರ್ಮವನ್ನು ಒಳಕೊಂಡ ಅನೇಕ ಸೂತ್ರಗಳನ್ನು ಉಪದೇಶಮಾಡಿದ್ದೂ ಈ ವೇಣುವನದಲ್ಲೇ.

ಹೀಗೆ ಆ ಮೊದಲನೆಯ ವರ್ಷದಲ್ಲಿ ಬುದ್ಧನಿಗೆ ಮೊದಲನೆಯ ಸಂಘಾರಾಮುವನ್ನು ಸಮರ್ಪಿಸಿದ ಮೇಲೆ, ಅಂದಿನಿಂದ ತನ್ನ ಮರಣ ಕಾಲದವರೆಗೂ, ಮೂವತ್ತೇಳು ವರ್ಷಗಳ ಕಾಲ, ಬಿಂಬಿಸಾರನು, ನಿಯಮಿಸಿದ ಶೀಲಗಳನ್ನು ಆಚರಿಸುವುದರಲ್ಲೂ ಉಪವಾಸದ ದಿನಗಳನ್ನು ನಡಸುವುದರಲ್ಲೂ ತನ್ನ ಪ್ರಜೆಗಳಿಗೆ ಮೇಲುಪಂಕ್ತಿಯಾದನು.

ಬಿಂಬಿಸಾರನಿಗೆ ಹಲವರು ಪತ್ನಿಯರಿದ್ದರು. ಅವರಲ್ಲಿ ಅಗ್ರಮಹಿಷಿಯಾದವಳು ಕೋಸಲದೇವಿ: ಕೋಸಲದೇಶದ ದೊರೆಯಾದ ಮಹಾಕೋಸಲನ ಮಗಳು, ಪ್ರಸೇನಜಿತ್ ರಾಜನ ತಂಗಿ. ಮದುವೆಯ ಕಾಲದಲ್ಲಿ, ಮಗಳ ಸ್ನಾನಚೂರ್ಣದ ವೆಚ್ಚಕ್ಕೆಂದು, ಕೋಸಲರಾಜನು ಕಾಶೀನಗರದ ಒಂದು ಗ್ರಾಮವನ್ನು ಬಳುವಳಿಯಾಗಿ ಮಗಳಿಗೆ ಕೊಟ್ಟನು.

ಇವರ ಮಗನೇ ಅಜಾತಶತ್ರು. ಈ ಮಗನಿಂದಾಗಿ, ಆ ತಂದೆಯ ಮರಣ ಬಹು ದಾರುಣವಾಯಿತು.

ಅಜಾತಶತ್ರು ಹುಟ್ಟುವ ಮೊದಲೇ, ದೈವಜ್ಞರು ಹೇಳಿದ್ದರು: 'ಈ ಮಗ ಪಿತೃಘಾತಕನಾಗುತ್ತಾನೆ' ಎಂದು. ಆ ಕಾರಣದಿಂದ ಕೋಸಲ ದೇವಿ ಗರ್ಭಘಾತಮಾಡಿಕೊಳ್ಳಲು ಪ್ರಯತ್ನಿಸಿದ್ದಳು. ಆದರೆ ಬಿಂಬಿಸಾರನು ಅವಳ ಉದ್ಯಮವನ್ನು ತಡೆಗಟ್ಟಿ, ಮಗು ಜನಿಸಿದಮೇಲೆ, ಅದನ್ನು ಪರಮ ಪ್ರೇಮದಿಂದ ಪಾಲಿಸಿ ಬೆಳಸಿದನು.

ಅಜಾತಶತ್ರುವಿಗೆ ಯೌವನ ಬಂತು. ಬುದ್ಧನಿಗೆ ದಾಯಾದಿಯಾಗಿ, ಆತನನ್ನು ದ್ವೇಷಿಸುತ್ತಿದ್ದ ದೇವದತ್ತನೆಂಬ ಭಿಕ್ಷುವಿನ ಪರಿಚಯವಾಯಿತು. ದೇವದತ್ತನ ಅದ್ಭುತವಾದ ಅಸಾಮಾನ್ಯ ಸಾಮರ್ಥ್ಯಗಳನ್ನು ಕಣ್ಣಾರೆ ಕಂಡು, ಅಜಾತಶತ್ರು ಅವನಿಗೆ ವಶವಾದನು. ಬಿಂಬಿಸಾರನು ಬುದ್ಧನಿಗೆ ಒದಗಿಸುತ್ತಿದ್ದ ಅನುಕೂಲತೆಗಳನ್ನು ಕಂಡು ದೇವದತ್ತನಿಗೆ ತುಂಬ ಅಸಹನೆ. ಆದ್ದರಿಂದ ಬಿಂಬಿಸಾರನನ್ನು ಕೊಂದು ತೀರಿಸಿಬಿಡುವಂತೆ ದೇವದತ್ತನು ಅಜಾತಶತ್ರುವಿಗೆ ಪ್ರೇರಣೆಮಾಡಿದನು. ಅಜಾತಶತ್ರುವಾದರೂ ಬುದ್ಧಿಯಿಲ್ಲದೆ ಪಿತೃಹತ್ಯೆಗೆ ಒಪ್ಪಿದನು.

ಆದರೆ ಅವರು ನಡಸಬೇಕೆಂದಿದ್ದ ಸಂಚು ರಟ್ಟಾಯಿತು. ಅಜಾತಶತ್ರುವಿಗೆ ಮರಣದಂಡನೆ ವಿಧಿಸಬೇಕೆಂದು ಮಂತ್ರಿಗಳು ಬಿಂಬಿಸಾರನಿಗೆ ಬೋಧೆಮಾಡಿದರು. ಆದರೆ ಆ ತಂದೆ ಮಗನ ಮೇಲಿನ ಮೋಹದಿಂದ, ಅದಕ್ಕೆ ಒಪ್ಪಲಿಲ್ಲ. ಮಗನನ್ನು ಕರೆದು, "ಹೀಗೇಕೆ ಮಾಡುತ್ತೀಯೆ? ನಿನಗೆ ರಾಜ್ಯ ಬೇಕೇನು? ಇದೋ, ನಿನಗೆ ಈ ನನ್ನ ರಾಜ್ಯವನ್ನು ಬಿಟ್ಟುಕೊಡುತ್ತೇನೆ." ಎಂದು ಮಗನಿಗೆ ರಾಜ್ಯವನ್ನು ಒಪ್ಪಿಸಿದನು.

ದೇವದತ್ತನು ಅಜಾತಶತ್ರುವನ್ನು ಛೀಗುಟ್ಟಿದನು. "ನಿನಗೆ ಬುದ್ಧಿಯಿಲ್ಲ. ನೀನು ಹೇಡಿ." ಎಂದು ಬೈದನು. "ನೀನು ಬರಿಯ ಚರ್ಮ ಹೊದಿಸಿದ ಒಂದು ತಮಟೆ. ಒಳಗೆ ಸೇರಿಕೊಂಡಿರುವುದು ಒಂದು ಇಲಿ." ಎಂದು ಮೂದಲಿಸಿದನು. ಈಗಲಾದರೂ ನಿನ್ನ ತಂದೆಯನ್ನು ತೀರಿಸಿಬಿಡು, ಎಂದು ಚಿತಾವಣೆಮಾಡಿದನು.

ಅಜಾತಶತ್ರು ತಂದೆಯನ್ನು ನೇರವಾಗಿ ಕೊಲ್ಲದೆ, ಆತನನ್ನು ಉಪವಾಸ ಕೆಡವಿ ಮುಗಿಸಿಬಿಡಬೇಕೆಂದು, ಬಿಂಬಿಸಾರನನ್ನು ಸೆರೆಹಿಡಿಸಿದನು. ಗಾಳಿ ಬೆಳಕುಗಳಿಲ್ಲದೆ ಅತ್ಯಂತ ತಾಪಕಾರಕವಾದ ಸೆರೆಯಲ್ಲಿ ಇರಿಸಿದನು. ಅಜಾತಶತ್ರುವಿನ ತಾಯಿ ಒಬ್ಬಳು ಹೊರತು ಬೇರೆ ಯಾರೂ ಆತನ ಮುಖ ಕೂಡ ನೋಡುವಂತಿರಲಿಲ್ಲ.

ಕೋಲಸದೇವಿ ತನ್ನ ಪತಿಯ ಸಂದರ್ಶನಕ್ಕೆ ಹೋಗುವಾಗ, ಚಿನ್ನದ ಪಾತ್ರೆಯ ತುಂಬ ಆಹಾರ ತುಂಬಿಕೊಂಡು, ಸೆರಗನ್ನು ಮರೆಮಾಡಿ, ತೆಗೆದುಕೊಂಡು ಹೋಗುತ್ತಿದ್ದಳು. ಅದು ಪತ್ತೆಯಾಗಿಹೋದಾಗ, ತಾನು ತಲೆಗೆ ಧರಿಸುವ ಕಿರೀಟದೊಳಗೆ ಆಹಾರವನ್ನು ಬಚ್ಚಿರಿಸಿಕೊಂಡು ಹೋದಳು. ಅದೂ ತಿಳಿದುಹೋದಮೇಲೆ, ಕಾಲು ಕಡಗದ ಜೊಳವೆಗಳಲ್ಲಿ ಆಪಷ್ಟನ್ನು ತುಂಬಿಕೊಂಡು ಹೋಗುತ್ತಿದ್ದಳು. ಅದೂ ಗೊತ್ತಾಗಿಹೋಯಿತು. ಕಡೆಗೆ ರಾಣಿ ರಾಜನನ್ನು ಕಾಣಲು ಹೋಗುವ ಮೊದಲು ಶುದ್ಧವಾದ ಗಂಧೋದಕದಿಂದ ಸ್ನಾನಮಾಡುವಳು; ನಾಲ್ಕು ರೀತಿಯ ಮಧುರವಾದ ಪದಾರ್ಥಗಳನ್ನು ಅರೆದು ಮೈಗೆ ಲೇಪಿಸಿಕೊಂಡು ಹೋಗುವಳು; ರಾಜನು ಆಕೆಯ ಮೈಯನ್ನು ನಾಲಗೆಯಿಂದ ನೆಕ್ಕಿ, ತನ್ನ ಹಸಿವಿನ ಬಾಧೆಯನ್ನು ಕಳೆಯಲು ಬಯಸುವನು.

ಕಟ್ಟಕಡೆಗೆ ಅಜಾತಶತ್ರು ಅದಕ್ಕೂ ಅಡ್ಡಿಪಡಿಸಿದನು. ದೊರೆ, ಒಂದು ಕಡೆ ಸುಮ್ಮನೆ ಕುಳ್ಳಿರಲಾಗದೆ. ಬುದ್ಧಗುರುವನ್ನು ಕುರಿತು ಧ್ಯಾನಮಾಡುತ್ತ, ತನ್ನ ಸೆರೆಮನೆಯ ಒಳಗೇ ಶತಪಥ ತಿರುಗುವನು.

ಇದು ಕೂಡ ಅಜಾತಶತ್ರುವಿಗೆ ಸಹನೆಯಾಗಲಿಲ್ಲ. ದೇವದತ್ತನ ಪ್ರೇರಣೆಯ ಮೇರೆ ಅರಸನ ಅಂಗಾಲುಗಳನ್ನು ಸೀಳಿಸಿ, ಅದರಲ್ಲಿ ಉಪ್ಪು ಹುಳಿಗಳನ್ನು ತುಂಬಿಸಿ, ಕೆಂಡಗಳಿಂದ ಸುಡಿಸಿದನು.

ಹೀಗೆಲ್ಲಾ ತನ್ನ ಮಗನೇ ತನಗೆ ಚಿತ್ರಹಿಂಸೆ ಮಾಡಿಸಿದರೂ, ಬಿಂಬಿಸಾರನು ಅವನ ಮೇಲಾಗಲಿ ಅವನಿಗೆ ಪ್ರೇರಕನಾದ ದೇವದತ್ತನ ಮೇಲಾಗಲಿ ಈಷತ್ತೂ ಅಸಮಾಧಾನಪಡದೆ, ಸಮಾಧಾನ ಚಿತ್ತದಿಂದ ಬುದ್ಧನನ್ನು ಧ್ಯಾನಿಸುತ್ತಾ, ಪ್ರಾಣ ಪರಿತ್ಯಾಗಮಾಡಿದನು. ಮರಣ ಹೊಂದಿದನಂತರ, ಚಾತುರ್ಮಹಾರಾಜಿಕ ಲೋಕದಲ್ಲಿ ವೈಶ್ರವಣನ ಪರಿವಾರದಲ್ಲಿ ಜನವೃಷಭನೆಂಬ ದೇವತೆಯಾಗಿ ಜನ್ಮವೆತ್ತಿದ್ದನು. ಆ ಜನವೃಷಭನೆಂಬ ಯಕ್ಷನು ಒಮ್ಮೆ ಬಂದು ಬುದ್ಧಗುರುವಿನೊಡನೆ ಆಡಿದ ಧರ್ಮಕಥೆ 'ಜನವೃಷಭಸೂತ್ರ'ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಬಿಂಬಿಸಾರನು ಮರಣಹೊಂದಿದ ಅದೇ ದಿವಸ ಅಜಾತಶತ್ರುವಿಗೆ ಪುತ್ರೋತ್ಸವವಾಯಿತು. ಮಗನ ಮುಖವನ್ನು ಕಂಡು ಹೊಸದಾದ ಒಂದು ಆನಂದವನ್ನು ಅನುಭವಿಸಿದಾಗ, ತನ್ನ ತಂದೆಗೂ ತನ್ನನ್ನು ಕಂಡು ಇಂತಹ ಪ್ರೀತಿಯುಂಟಾಗಿರಬಹುದೇ ಎಂದು ಅವನಿಗೆನ್ನಿಸಿತು. ಅಜಾತಶತ್ರು ತಾಯಿಯನ್ನು ಕೇಳಿದನು. ಆಕೆ, ಅಜಾತಶತ್ರುವಿನ ಬಾಲ್ಯದ ಕತೆಗಳನ್ನೆಲ್ಲಾ ಹೇಳಿದಳು, ಬಿಂಬಿಸಾರನ ಪುತ್ರಪ್ರೇಮವನ್ನು ಚಿತ್ರಿಸಿದಳು. ಅಜಾತಶತ್ರುವಿಗೆ ಆಗ ಪಶ್ಚಾತ್ತಾಪ ತಲೆದೋರಿತು. ಆದರೆ, ಅಟ್ಟಮೇಲೆ ಒಲೆ ಉರಿಯಿತು ಎಂದಹಾಗೆ, ಆವೇಳೆಗೆ ಕೆಲಸ ಕೈಮಿಂಚಿ ಹೋಗಿತ್ತು.

— ೩ —

"ಹೋಗಲಿ, ಬಿಡಯ್ಯ. ತಂದೆಯನ್ನು ಕೊಂದವನ ಕಥೆ ಅದೇನೆಂದು ಕೇಳುವುದು?"

"ಛೆಛೆಛೆ! ಹಾಗೆನ್ನಬೇಡಿ. ಅಜಾತಶತ್ರು ಒಳ್ಳೆಯವನೇ. ದೇವದತ್ತನ ಸಹವಾಸಕ್ಕೆ ಸಿಕ್ಕಿ, ಪಾಪ, ಹಾಳಾಗಿಹೋದ. ಆದರೆ, ಅವನ ತಂದೆಯ ಸ್ನೇಹಿತ ಒಬ್ಬ ಇದ್ದ, ಜೀವಕ ಎಂದು ಅವನ ಹೆಸರು; ಇವನು ಸಕಾಲದಲ್ಲಿ ತಕ್ಕ ಚಿಕಿತ್ಸೆ ಮಾಡಿದ್ದರಿಂದ ಅಜಾತಶತ್ರು ಚೇತರಿಸಿಕೊಂಡ. ಆ ಕತೆ ಹೇಳುತ್ತೇನೆ, ಕೇಳಿ."

ಬಿಂಬಿಸಾರನನ್ನು ಕೊಲ್ಲುವಂತೆ ಅಜಾತಶತ್ರುವಿಗೆ ದೇವದತ್ತ ಪ್ರೇರಣೆಮಾಡಿದ್ದಲ್ಲದೆ, ಬುದ್ಧನನ್ನು ಸಂಹರಿಸಲು ತಾನೇ ಅನೇಕ ಹೂಟಗಳನ್ನು ಹೂಡಿದ. ಆದರೆ, ಅವು ಒಂದೂ ಸಾಗಲಿಲ್ಲ. ಅದರ ಕತೆ ಇನ್ನೊಮ್ಮೆ ಹೇಳುತ್ತೇನೆ. ಈಗ ಅಜಾತಶತ್ರು ಏನಾದನೋ, ಕೇಳಿ.

ತಂದೆಯನ್ನು ಕಳೆದುಕೊಂಡಮೇಲೆ, ಅಜಾತಶತ್ರುವಿಗೆ ಪಶ್ಚಾತ್ತಾಪ ಉದಯಿಸಿತೆಂದು ಹೇಳಿದೆನಲ್ಲವೆ. ಆಗ ಅವನಿಗೆ ಮನಸ್ಸಿಗೆ ತುಂಬಾ ಕ್ಲೇಶವುಂಟಾಗಿ, ಆಗಿನ ಕಾಲಕ್ಕೆ ಧರ್ಮಗುರುಗಳು ಎಂದು ಯಾರುಯಾರು ಇದ್ದರೋ ಅವರ ಬಳಿಗೆಲ್ಲಾ ಹೋಗಿ, ತಾನು ಮಾಡಿದ ದುಷ್ಕೃತ್ಯಕ್ಕೆ ಪರಿಹಾರ ಏನಾದರೂ ಉಂಟೆ ಎಂದು ವಿಚಾರಿಸಿ ವಿಚಾರಿಸಿ, ಯಾರಿಂದಲೂ ಸಮರ್ಪಕವಾದ ಉತ್ತರ ದೊರೆಯದೆ, ಹುಚ್ಚುಹಿಡಿದ ಹಾಗೆ ಆಗಿದ್ದ.

ಆಗಲೇ ಜೀವಕನು ಅವನ ಮನಸ್ಸು ಪಕ್ವವಾಗುತ್ತಿದ್ದುದನ್ನು ಕಂಡು, ಅವನನ್ನು ಬುದ್ಧನ ಬಳಿಗೆ ಕರೆದುಕೊಂಡುಹೋದದ್ದು.

ಬುದ್ಧನಾದರೂ ಅಜಾತಶತ್ರುವನ್ನು ಏನೊಂದೂ ಆಕ್ಷೇಪಿಸಲಿಲ್ಲ. ಬಹಳ ಸೌಜನ್ಯದಿಂದ ಅವನನ್ನು ಬರಮಾಡಿಕೊಂಡು, ಅವನ ಕುಶಲ ಪ್ರಶ್ನೆಗಳನ್ನು ವಿಚಾರಿಸಿದ. ಧರ್ಮವನ್ನು ಕುರಿತು ಅಜಾತಶತ್ರು ಕೇಳಿದ ಪ್ರಶ್ನೆಗಳಿಗೆಲ್ಲ ಸಾವಧಾನದಿಂದ ಉತ್ತರ ಹೇಳಿದ. ಅಜಾತಶತ್ರುವಿನ ಮನಸ್ಸು ಆ ಮಾತುಕತೆಗಳಿಂದ ಸಮಾಧಾನಹೊಂದಿತು.

ಆಗ ಅಜಾತಶತ್ರು ತನ್ನ ಪಿತೃಹತ್ಯೆಯಿಂದ ತನಗಾದ ಪರಿತಾಪವನ್ನು ಹೇಳಿಕೊಂಡು, ಅದಕ್ಕೆ ಪರಿಹಾರವನ್ನು ಕೇಳಿದ. ಭಗವಂತನು ಅದಕ್ಕೆ ಈ ಮಾತು ಹೇಳಿದ: "ಯಾವನು ಹಿಂದೆ ಪಾಪ ಮಾಡಿರುತ್ತಾನೋ ಅವನು ಅನಂತರ ಪಾಪಮಾಡುವುದು ಬಿಟ್ಟು ಪುಣ್ಯವನ್ನು ಮಾಡುತ್ತಾ ಹೋದರೆ, ಅವನು ಮೋಡದ ಮರೆಯಿಂದ ಬಂದ ಚಂದ್ರನ ಹಾಗೆ ಬೆಳಗುತ್ತಾನೆ."

ಅಂದಿನಿಂದ ಅಜಾತಶತ್ರು ಬುದ್ಧನಲ್ಲಿ ತುಂಬ ಶ್ರದ್ಧೆಯಿಟ್ಟು ಬದುಕ ತೊಡಗಿದ.

ಅಜಾತಶತ್ರುವಿಗೆ ಬುದ್ಧನಲ್ಲಿ ಎಷ್ಟು ಗೌರವ ಪ್ರೀತಿಗಳು ಇದ್ದಿ ತೆಂದರೆ, ಒಮ್ಮೆ ಮುಂಡಿಕಾಪುತ್ರನೆಂಬವನು ಬುದ್ಧನನ್ನು ಕುರಿತು ಏನೋ ಲಘುವಾಗಿ ಮಾತನಾಡಿದ್ದಕ್ಕೆ, ಅಸಾಧ್ಯಕ್ರೋಧದಿಂದ ಉರಿದೆದ್ದನು.

ಅಜಾತಶತ್ರು ಪಟ್ಟಕ್ಕೆ ಬಂದ ಎಂಟನೇ ವರ್ಷದಲ್ಲಿ ಬುದ್ಧನ ಪರಿ ನಿರ್ವಾಣ ನಡೆಯಿತು. ದೊರೆಗೆ ಆ ಸುದ್ದಿಯನ್ನು ತಿಳಿಸಲು ಆಸ್ಥಾನ ದವರು ಯಾರಿಗೂ ಧೈರ್ಯವಿಲ್ಲ, ದುಃಖದಿಂದ ಆತ ಎದೆಯೊಡೆದು ಸತ್ತಾನೆಂದು ಎಲ್ಲರಿಗೂ ದಿಗಿಲು. ಕಡೆಗೆ, ಯಾವುದೋ ಕೆಟ್ಟ ಕನಸಿನ ದೋಷ ಪರಿಹಾರಕ್ಕಾಗಿ ಎಂದು ಇಲ್ಲದ ನೆಪ ಹೇಳಿ, ನಾಲ್ಕು ತೆರನಾದ ಮಧುರ ದ್ರವ್ಯಗಳು ತುಂಬಿದ ಕಡಾಯಿನಲ್ಲಿ ಆತನನ್ನು ಕುಳ್ಳಿರಿಸಿ, ಆ ದುಃಖದ ವಾರ್ತೆಯನ್ನು ತಿಳಿಸಿದರಂತೆ. ಕೂಡಲೆ ದೊರೆಗೆ ಎಚ್ಚರ ತಪ್ಪಿತು. ಅನಂತರ ಉಚಿತವಾದ ಶೈತ್ಯೋಪಚಾರಗಳಿಂದ ಆತನು ಚೇತರಿಸಿಕೊಂಡು ಎಚ್ಚತ್ತನು. ಆದರೂ ಅನಂತರ ಬಹುಕಾಲದ ವರೆಗೂ ಬುದ್ಧನ ಶೀಲಗಳನ್ನು ಜ್ಞಾಪಿಸಿಕೊಳ್ಳುತ್ತ ಹುಚ್ಚನಂತೆ ಆಗಿ ಹೋಗಿದ್ದನು.

ಮುಂದೆ, ಬುದ್ಧನ ದೇಹಕ್ಕೆ ಅಗ್ನಿ ಸಂಸ್ಕಾರವಾದ ಮೇಲೆ, ಆ ಪವಿತ್ರವಾದ ಅವಶೇಷಗಳಲ್ಲಿ ಒಂದು ಪಾಲು ಪಡೆದನು. ಅವುಗಳಿಗಾಗಿ ರಾಜಗೃಹದಲ್ಲಿ ಒಂದು ಸ್ತೂಪವನ್ನು ಕಟ್ಟಿಸಿದನು. ಎರಡು ತಿಂಗಳು ಗಳಾದಮೇಲೆ, ಬುದ್ಧನ ಶಿಷ್ಯರು ಸೇರಿ ಮೊದಲನೆಯ ಧರ್ಮಸಭೆಯನ್ನು ನಡೆಸಿದಾಗ, ಅಜಾತಶತ್ರು ಆ ಸಮ್ಮೇಳನಕ್ಕೆ ತನ್ನ ರಾಜಾಶ್ರಯವನ್ನು ನೀಡಿ, ಬಹುವಿಧದಲ್ಲಿ ಸಹಾಯಮಾಡಿದನು.

ಅಜಾತಶತ್ರು ಪ್ರಸೇನಜಿತನ ತಂಗಿಯ ಮಗ ಎಂದು ಹಿಂದೆಯೇ ಹೇಳಲಿಲ್ಲವೆ. ಬಿಂಬಿಸಾರ ಮಗನಿಂದ ಹತನಾದ ಮೇಲೆ, ಆತನ ಹೆಂಡತಿ ಅದೇ ದುಃಖದಲ್ಲಿ ತೀರಿಕೊಂಡಳು. ಅವಳಿಗೆ ಮದುವೆಯಾದಾಗ ಅವಳ ತಂದೆಯಾದ ಮಹಾಕೋಸಲನು ಮಗಳಿಗೆ ಬಳುವಳಿಯಾಗಿ ಒಂದು ಕಾಶೀಗ್ರಾಮದ ಹುಟ್ಟುವಳಿಯನ್ನು ಕೊಟ್ಟಿದ್ದನು. ಈಗ ಆ ಮಗಳ ಮರಣವಾದ ಮೇಲೆ, ಪ್ರಸೇನಜಿತನು ಅದನ್ನು ತಪ್ಪಿಸಿಬಿಟ್ಟನು. ಆದರಿಂದ ಅಜಾತಶತ್ರುವಿಗೆ ಕೋಪಬಂದು, ಮಾವನ ಮೇಲೆ ದಂಡೆತ್ತಿ

ಯುದ್ಧ ಹೂಡಿದನು. ಮೊದಲು ಮೊದಲು ಅಜಾತಶತ್ರುವಿಗೆ ವಿಜಯ ವಾದರೂ, ಕಡೆಗೆ ಅವನು ಸೋತು, ಪ್ರಸೇನಜಿತನಿಗೆ ಸೆರೆಸಿಕ್ಕಿದನು. ಪ್ರಸೇನಜಿತನಾದರೂ, ಧನುಗ್ರಹ ತಿಷ್ಯನೆಂಬ ಭಿಕ್ಷುವಿನ ಮಾತಿನ ಮೇಲೆ ತನ್ನ ಸೋದರಳಿಯನನ್ನು ಉಗ್ರವಾಗಿ ಶಿಕ್ಷಿಸದೆ, ಸರಿಯಾಗಿ ನಡೆದು ಕೊಳ್ಳುವೆನೆಂದು ಅವನಿಂದ ವಚನ ತೆಗೆದುಕೊಂಡು, ಅಗ್ನಿಸಾಕ್ಷಿಕವಾಗಿ ಸ್ನೇಹವನ್ನು ಬೆಸೆಯಿಸಿ, ಅವನನ್ನು ಬಿಟ್ಟು ಕಳುಹಿಸಿದನು. ಅಷ್ಟೇ ಅಲ್ಲ, ಅವನಿಗೆ ತನ್ನ ಮಗಳಾದ ವಜಿರಾದೇವಿಯನ್ನು ಮದುವೆ ಮಾಡಿಕೊಟ್ಟು, ಇಷ್ಟೆಲ್ಲ ವಿವಾದಕ್ಕೆ ಕಾರಣವಾಗಿದ್ದ ಅದೇ ಕಾಶೀಗ್ರಾಮದ ಹುಟ್ಟುವಳಿ ಯನ್ನು ಆ ಮಗಳಿಗೆ ಸ್ನಾನಚೂರ್ಣದ ವೆಚ್ಚಕ್ಕೆಂದು ಒಪ್ಪಿಸಿದನು.

ಮುಂದೆ ಒಂದು ಸಲ, ಅದೇ ಪ್ರಸೇನಜಿತನು ತನ್ನ ಮಗನಾದ ವಿಡೂಢಭ—ಏನು ವಿಚಿತ್ರವಾದ ಹೆಸರು!—ಅವನ ದ್ರೋಹದಿಂದ ರಾಜ್ಯ ಕಳೆದುಕೊಂಡು, ಏಕಾಕಿಯಾಗಿ ತಲೆ ತಪ್ಪಿಸಿಕೊಂಡು ಓಡಬೇಕಾಯಿತು. ಆಗ ಅಜಾತಶತ್ರುವಿನ ರಕ್ಷಣೆಯನ್ನು ಬೇಡಿ ರಾಜಗೃಹಕ್ಕೆ ತಿರುಗಿದನು. ಆದರೆ, ಮಧ್ಯಮಾರ್ಗದಲ್ಲೇ ಅವನಿಗೆ ಮೃತ್ಯು ಪ್ರಾಪ್ತವಾಯಿತು. ಕಡೆಗೇನೋ ಅಜಾತಶತ್ರುವೇ ಆತನಿಗೆ ಸಕಲ ರಾಜಮರ್ಯಾದೆಗಳಿಂದ ಕಡೆಯ ಸಂಸ್ಕಾರಗಳನ್ನೆಲ್ಲ ನೆರವೇರಿಸಿದನು.

ನೋಡಿ, ಕೊಂದವರಿಗೆ ಕೊಲೆ ತಪ್ಪುವುದಿಲ್ಲ, ಎಂದು ಮಾತಿಗೆ ಮುಂಚೆ ಹೇಳುವುದುಂಟು. ಅಜಾತಶತ್ರು ತನ್ನ ತಂದೆಯನ್ನು ಕೊಂದ ನಲ್ಲಾ, ಅವನ ಗತಿ ಏನಾಯಿತು ಗೊತ್ತೆ?

ಅಜಾತಶತ್ರುವಿಗೆ ಒಬ್ಬ ಮಗ. ಉದಾಯಿಭದ್ರ ಎಂದು ಅವನ ಹೆಸರು. ಆ ಮಗು ಹುಟ್ಟಿದಾಗಲೇ ಅಜಾತಶತ್ರುವಿನ ಕಠೋರ ಹೃದ ಯಕ್ಕೆ ಪುತ್ರವಾತ್ಸಲ್ಯದ ಪರಿಚಯ ತಲೆದೋರಿದ್ದು. ಆದರೆ ಹುಡುಗ ಬೆಳೆಯುತ್ತ ಬಂದಹಾಗೆಲ್ಲ, ತಾನು ತನ್ನ ತಂದೆಯನ್ನು ಕೊಂದ ಹಾಗೆ ತನ್ನ ಮಗ ತನ್ನನ್ನು ಎಲ್ಲಿ ಕೊಂದುಬಿಡುವನೋ ಎಂದು ಅಜಾತಶತ್ರು ವಿಗೆ ಭೀತಿ ಬೆಳೆಯುತ್ತಾ ಬಂತು. ಮಗು ಇನ್ನೂ ಚಿಕ್ಕವನಾಗಿರು ವಾಗಲೇ, ಒಮ್ಮೆ ಅಜಾತಶತ್ರು ಬುದ್ಧನ ಸಂದರ್ಶನಕ್ಕೆ ಹೋದಾಗ, ಬುದ್ಧನ ಸಮುದ್ರ ಸದೃಶವಾದ ಶಾಂತಿಯನ್ನು ಕಂಡು, "ನನ್ನ ಮಗ

ನಾದ ಉದಾಯಿಭದ್ರನಿಗೂ ಇಂತಹ ಶಾಂತಿ ದೊರಕಲಿ” ಎಂದು ಹಾರೈಸಿ ಕೊಂಡಿದ್ದನು. ಆದರೆ, ಅವನು ಅಂಜಿಕೊಂಡಿದ್ದಂತೆಯೇ ಆಯಿತು. ಉದಾಯಿಭದ್ರ ಅಜಾತಶತ್ರುವನ್ನು ಕೊಂದು, ತಾನು ಹದಿನಾರು ವರ್ಷ ಕಾಲ ರಾಜ್ಯವಾಳಿದನು.

ಇದೇ ತಂದೆಯ ಕೊಲೆಯ ಕತೆ ಕುಣಿಕೆ ಕುಣಿಕೆಯಾಗಿ ಮುಂದೆ ಬೆಳೆಯಿತು. ಉದಾಯಿಭದ್ರನನ್ನು ಅವನ ಮಗ ಅನುರುದ್ಧಕ ತಾನು ಕೊಂದ. ಅನುರುದ್ಧಕ ತನ್ನ ಮಗನಾದ ಮುಂಡನಿಂದ ತಾನು ಹತ ನಾದ. ಮುಂಡನನ್ನು ಅವನ ಮಗ ನಾಗದಾಸಕ ಕೊಂದ. ಹೀಗೆ ತಂದೆಯನ್ನು ಕೊಂದು ಪಟ್ಟಕ್ಕೆ ಬಂದ ಮಕ್ಕಳ ನಡತೆಗೆ ಹೇಸಿ, ಕಡೆಗೆ ಮಗಧದ ಜನ ನಾಗದಾಸನನ್ನು ಪದಚ್ಯುತನನ್ನಾಗಿ ಮಾಡಿ, ಶಿಶುನಾಗ ನನ್ನು ಪಟ್ಟಕ್ಕೆ ತಂದರು.

— ೪ —

“ಅದು ಯಾರಯ್ಯ ಅದು? ಆ ಅರಿಯದ ಅಜಾತಶತ್ರುವಿಗೆ ತಂದೆ ಯನ್ನು ಕೊಲ್ಲುವಂತೆ ದುರ್ಬೋಧನೆ ಮಾಡಿದವನು? ಯಾರವನು ಆ ದೇವದತ್ತ?”

ಓ, ಅವನೆ? ಬುದ್ಧನ ಸೋದರಮಾವನ ಮಗ. ಸುಪ್ರಬುದ್ಧ ಎಂದು ಅವನ ತಂದೆಯ ಹೆಸರು. ಬುದ್ಧಗುರು ತಾನು ಹುಟ್ಟಿದೂರಿಗೆ ಮೊದಲ ಬಾರಿ ಬಂದಾಗ, ಅವನ ಶಿಷ್ಯರಾದವರಲ್ಲಿ ಇವನೂ ಒಬ್ಬ. ಇತರರ ಬಲವಂತಕ್ಕಾಗಿ ಶ್ರಮಣನಾದವನು. ಧ್ಯಾನವನ್ನು ಚೆನ್ನಾಗಿ ಮಾಡಿ, ಕೆಲವು ಅದ್ಭುತ ಶಕ್ತಿಗಳನ್ನು ಪಡೆದನು. ಗಾಳಿಯಂತಾಗಿ ಗೋಡೆಯನ್ನು ಹಾಯ್ದು ತೂರುವನು, ಯಾವ ರೂಪ ಬೇಕಾದರೆ ಆ ರೂಪ ತಾಳುವನು.

ಅವನಂತೆಯೇ ಈ ಅದ್ಭುತ ಶಕ್ತಿಗಳನ್ನು ಸಂಪಾದಿಸಿದವರು, ತಮ್ಮ ಧ್ಯಾನವನ್ನು ಮುಂದುವರಿಸಿ, ಮುಕ್ತಿ ಪಡೆದವರು. ಆದರೆ ದೇವದತ್ತ

ನಿಗಾದರೋ, ತನ್ನ ಶಕ್ತಿಗಳಿಂದ ತಲೆ ತಿರುಗಿತು. ನಾಯಿಗೆ ಪಿತ್ತ ಪ್ರಕೋಪವಾದರೆ, ಆದಕ್ಕೆ ಆನೆಯನ್ನು ಎದುರಿಸುವ ಹುಮ್ಮಸ್ಸು ಬರುತ್ತದಂತೆ; ಆನೆಯ ಮೇಲೆ ಹೋಗಿ, ಅದರ ಕಾಲಡಿ ನಾಶವಾಗುತ್ತದಂತೆ. ಹಾಗೆಯೇ ದೇವದತ್ತನಿಗಾದರೂ ಮಿತಿಮೀರಿದ ಅಹಂಕಾರ ತಲೆಯೆತ್ತಿತು.

"ಬುದ್ಧನಿಗೂ ನನಗೂ ಏನು ವ್ಯತ್ಯಾಸ? ನಾವು ಒಂದೇ ಕುಲ, ಒಂದೇ ಜನ, ಒಂದೇ ವಯಸ್ಸು. ಆದರೆ ಈಗ ಮಾತ್ರ ಅವನಿಗೆ ಎಲ್ಲರೂ ಪೂಜೆ ಮಾಡುತ್ತಾರೆ! ನನ್ನನ್ನು ಕೇಳುವವರೇ ಇಲ್ಲ. ಇರಲಿ; ನಾನು ಒಂದು ಐನೂರು ಭಿಕ್ಷುಗಳನ್ನು ನನ್ನ ಪರಿವಾರವಾಗಿ ಕಟ್ಟಿಕೊಳ್ಳುತ್ತೇನೆ. ಅದಕ್ಕಿಂತ ಮುಂಚೆ, ಯಾವನಾದರೂ ರಾಜನ ಆಶ್ರಯವನ್ನು ಪಡೆದರೆ, ಮುಂದಿನ ಕೆಲಸ ಸುಲಭ. ಈ ಮಗಧದ ರಾಜನೂ ಇವನಂತೆಯೇ ಇತರ ರಾಜರೂ ಆಗಲೇ ಬುದ್ಧನಿಗೆ ಶರಣಾಗಿದ್ದಾರೆ. ಬುದ್ಧಿವಂತರಾದ ಇವರಿಗೆ ಮೋಸಮಾಡುವುದು ಸುಲಭವಲ್ಲ. ಆದರೆ, ಈ ರಾಜಗೃಹದ ದೊರೆಯಾದ ಬಿಂಬಿಸಾರನ ಮಗ ಅಜಾತಶತ್ರು ಇನ್ನೂ ಹುಡುಗ, ಬುದ್ಧಿ ಬಲಿತಿಲ್ಲ, ಕಾರ್ಯಾಕಾರ್ಯಗಳನ್ನು ಇವನು ಅರಿಯ, ತಂದೆತಾಯಿಯರಿಗೆ ವಿಧೇಯನಲ್ಲವೆಂದು ಕೇಳಿದ್ದೇನೆ. ಇವನನ್ನು ಏನಾದರೂ ಮಾಡಿ ಒಲಿಸಿಕೊಂಡು, ನನ್ನ ಕೆಲಸವನ್ನು ನಾನು ಮಾಡಿಕೊಳ್ಳಬೇಕು." ಎಂದು ದೇವದತ್ತನು ಆಲೋಚಿಸಿದನು.

ಬಿಂಬಿಸಾರನ ಪತ್ನಿ ಅಜಾತಶತ್ರುವನ್ನು ಗರ್ಭದಲ್ಲಿ ಧರಿಸಿದ್ದಾಗ ಅವಳಿಗೆ ಒಂದು ವಿಚಿತ್ರವಾದ ಬಯಕೆ ತಲೆದೋರಿತ್ತು. ದೊರೆಯ, ಎಂದರೆ ತನ್ನ ಸ್ವಂತ ಗಂಡನ, ಭುಜದಿಂದ ತೆಗೆದ ರಕ್ತವನ್ನು ಕುಡಿಯಬೇಕೆಂದು ಆಶಿಸಿದ್ದಳು. ಆದರೆ ಅದನ್ನು ಯಾರಲ್ಲಿಯೂ ಹೇಳಿಕೊಳ್ಳಲು ಅವಳಿಗೆ ಮನಸ್ಸು ಬರಲಿಲ್ಲ. ಬಯಕೆ ಈಡೇರದೆ, ಹಾಗೇ ಆಕೆ ಬಾಡಿ ಹೋಗುತ್ತಿದ್ದಳು. ದೊರೆ ಮೇಲಿಂದ ಮೇಲೆ ಕುತ್ತಿ ಕುತ್ತಿ ಕೇಳಿ, ರಾಣಿ ಸಂಕೋಚದಿಂದ ತನ್ನ ಬಯಕೆಯನ್ನು ಬಾಯಿಬಿಟ್ಟು ಹೇಳಿಕೊಂಡಳು. ತಾನು ನಿಸ್ಸಂಕೋಚವಾಗಿ ನೆರವೇರಿಸಬಹುದಾದ್ದನ್ನು

ರಾಣಿ ಕೋರಿದಳಲ್ಲಾ ಎಂದು ರಾಜನಿಗೆ ಹಿಗ್ಗಾಯಿತು. ಕೂಡಲೆ ರಾಜವೈದ್ಯನನ್ನು ಕರೆಸಿದನು. ವೈದ್ಯನು ರಾಜನ ಬಲಭುಜದಿಂದ ರಕ್ತವನ್ನು ತೆಗೆದು, ಚಿನ್ನದ ಪಾತ್ರೆಯನ್ನು ತುಂಬಿದನು. ರಾಣಿ ಅದಕ್ಕೆ ನೀರು ಬೆರಸಿಕೊಂಡು ಕುಡಿದಳು. ಮೊದಲಿನಂತೆ ಆರೋಗ್ಯವಂತೆಯಾದಳು.

ರಾಣಿಯ ಆ ಬಯಕೆಯನ್ನೂ ಅದು ಪೂರಣವಾದುದನ್ನೂ ರಾಜ್ಯದ ನೈಮಿತ್ತಿಕರು ಕೇಳಿದರು. "ಇಂಥ ಬಯಕೆಯುಂಟಾದ್ದರಿಂದ, ಈ ರಾಣಿ ಪಡೆಯುವ ಪುತ್ರನು ಪಿತೃಘಾತಕನಾಗುತ್ತಾನೆ." ಎಂದು ಭವಿಷ್ಯ ಹೇಳಿದರು. ರಾಣಿ ಅವರ ಮಾತನ್ನು ಕೇಳಿ ಭೀತಿಗೊಂಡಳು. ಅರಮನೆಯ ಉದ್ಯಾನವನಕ್ಕೆ ಏಕಾಂತದಲ್ಲಿ ಹೋಗಿ, ಗರ್ಭವನ್ನು ಕಳೆದುಕೊಳ್ಳಲು ಪ್ರಯತ್ನಿಸಿದಳು. ರಾಣಿ ಒಬ್ಬಳೇ ಹೀಗೆ ಹೋಗುತ್ತಿದ್ದುದನ್ನು ಗಮನಿಸಿ, ದೊರೆ ಅವಳ ಸಖಿಯರನ್ನು ವಿಚಾರಿಸಿದನು. ಗುಟ್ಟು ರಟ್ಟಾಯಿತು. ದೊರೆಗೆ ಕೋಪ ಬಂತು. ರಾಣಿಯನ್ನು ಛೀಗುಟ್ಟಿದನು. ಮಗು ಗಂಡಾಗದೆ ಹೆಣ್ಣೇ ಆದರೂ ಆಗಬಹುದೆಂದು ಧೈರ್ಯ ಹೇಳಿದನು. ಇತರ ದೊರೆಗಳಿಗೆ ಈ ಸುದ್ದಿ ತಿಳಿದರೆ ಸಂತೋಷವಾಗದೇ, ಎಂದು ಪೇಚಾಡಿದನು. ರಾಣಿ ಒಂಟಿಯಾಗಿ ಇರಲು ಆಗದಂತೆ ಅಂಗರಕ್ಷಕರನ್ನು ಏರ್ಪಡಿಸಿದನು.

ಆದರೂ ರಾಣಿಯ ಮನಸ್ಸಿಗೆ ನೆಮ್ಮದಿಯಿಲ್ಲ. ಮಗು ಗಂಡಾದರೆ, ಅದನ್ನು ನಾಶಮಾಡಿಯೇಬಿಡಬೇಕು, ಎಂದು ಅವಳು ನಿಶ್ಚಯಿಸಿದಳು. ಆದರೆ, ದೊರೆ ಏನು ಮಾಡಿದ? ಮಗು ಜನನವಾಗಿ, ತಾಯಿ ಎಚ್ಚರಗೊಳ್ಳುವ ಮೊದಲೇ, ಸೂಲಗಿತ್ತಿಯರು ಅದನ್ನು ಕೊಂಡುಹೋಗುವಂತೆ ಏರ್ಪಡಿಸಿದ. ಹೀಗಾಗಿ, ಮಗು ಬದುಕಿಕೊಂಡಿತು.

ಮಗುವಿಗೆ ಎರಡು ಮೂರು ವರ್ಷವಾಯಿತು ದೊರೆ, ಒಂದು ದಿನ ಆ ಮಗುವಿಗೆ ಅಲಂಕಾರ ಮಾಡಿಸಿ, ಅದನ್ನು ರಾಣಿಯ ಬಳಿಗೆ ಕರೆದುಕೊಂಡು ಬಂದು ಕಾಣಿಸಿದ. ರಾಣಿಗೆ ಆ ಮಗುವಿನ ಮೇಲೆ ಪ್ರೀತಿ ಅಧಿಕವಾಗಿ ಉಕ್ಕಿತು. ಅವಳು ಅದನ್ನು ಕೊಲ್ಲಲಾರದೆ ಹೋದಳು.

ಮಗುವಿಗೆ ಅಜಾತಶತ್ರು ಎಂದು ನಾಮಕರಣ ಮಾಡಿದರು. ಈ

ಮಗುವಿಗೆ ಶತ್ರುವಾಗುವವನು ಯಾರೂ ಹುಟ್ಟಿಲ್ಲ ಎಂದು ಆ ಹೆಸರಿಗೆ ಅರ್ಥವಾಗುವುದಾದರೂ ಈ ಮಗು ಇನ್ನೂ ಹುಟ್ಟುವುದಕ್ಕೆ ಮೊದಲಿನಿಂದಲೇ ತನ್ನ ತಂದೆಗೆ ಶತ್ರುವಾಗಿದ್ದನು ಎಂದು ಬೇಕಾಗಿದ್ದರೂ ಅರ್ಥ ಮಾಡಬಹುದಾಗಿತ್ತು.

ಹದಿನಾರು ವರ್ಷದ ವೇಳೆಗೆ ಅಜಾತಶತ್ರು ಯುವರಾಜನಾದನು.

ಆ ಕಾಲದಲ್ಲಿ ಬುದ್ಧಗುರು ಕೌಶಾಂಬಿಯಲ್ಲಿ ಇದ್ದನು. ಆತನು ಇಲ್ಲದ ಹೊತ್ತಿನಲ್ಲಿ ದೇವದತ್ತನು ಏಕಾಕಿಯಾಗಿ ರಾಜಗೃಹಕ್ಕೆ ಹೋಗಿ, ಅಲ್ಲಿ ಒಂದು ದಿನ ಜೇತವನ ವಿಹಾರದಲ್ಲಿ ತಂಗಿದನು. ಆ ಸಮಯದಲ್ಲಿ ತಾನು ತನ್ನನ್ನು ಏಳು ನಾಗಗಳ ಆಕಾರವಾಗಿ ಒಡೆದುಕೊಂಡು, ಆಕಾಶ ಮಾರ್ಗವಾಗಿ ಅಜಾತಶತ್ರು ಕುಳಿತಿದ್ದ ಕಡೆಗೆ ಹಾರಿಹೋದನು. ಅಲ್ಲಿ ಮತ್ತೆ ತಾನು ಬಳೆಗಳ ಆಕಾರವನ್ನು ತಾಳಿಕೊಂಡು, ಅಜಾತಶತ್ರುವಿನ ಎರಡು ಕಾಲಿನ ಸುತ್ತ, ಎರಡು ಕೈಗಳ ಸುತ್ತ, ಎರಡು ಭುಜಗಳ ಸುತ್ತ ಸುತ್ತಿಕೊಂಡನು. ಒಂದು ಬಳೆ ಅವನ ತೊಡೆಯಲ್ಲಿ ಬಿದ್ದಿತ್ತು.

ಬಳೆಗಳ ಆಕಾರದಲ್ಲಿ ಬಂದು ಬಳಸಿಕೊಂಡ ಆ ಹಾವುಗಳನ್ನು ಕಂಡು ಅಜಾತಶತ್ರುವಿಗೆ ಜೀವಭಯ ತಲೆದೋರಿತು. ಆದರೂ, ರಾಜನ ಮಗನಲ್ಲವೆ! ಧೈರ್ಯದಿಂದ, ಕುಳಿತ ಸ್ಥಳದಿಂದ ಕದಲದೆ, ಆ ಸರ್ಪಗಳನ್ನು ನಾಶಪಡಿಸುವಂತೆ ಪರಿವಾರದವರನ್ನು ಕರೆದು ಆಜ್ಞೆಮಾಡಿದನು.

ಆಗ ದೇವದತ್ತನು, ತನ್ನ ಏಳು ಸರ್ಪಗಳ ರೂಪವನ್ನು ಉಪಸಂಹಾರ ಮಾಡಿಕೊಂಡು, ತನ್ನ ನಿಜಸ್ವರೂಪವನ್ನು ತೋರಿಸಿದನು. ಅಜಾತಶತ್ರು ಅವನ ಅದ್ಭುತದ ಮಹಿಮೆಗೆ ಮಾರುಹೋದನು. "ನೀನು ಅನುಗ್ರಹಿಸುವುದಾದರೆ, ನನ್ನನ್ನು ಶಿಷ್ಯನೆಂದು ಸ್ವೀಕರಿಸಬೇಕು" ಎಂದು ಬೇಡಿದನು. ದೇವದತ್ತನು ಅವನಿಗೆ ಅಭಯವನ್ನು ನೀಡಿದನು. ಅಂದಿನಿಂದ ಅವರಿಬ್ಬರೂ— ಗುರುಶಿಷ್ಯರೆಂದಲ್ಲ— ಪರಮ ಮಿತ್ರರಾದರು.

ಅಜಾತಶತ್ರು ಗಯಾನದೀತೀರದಲ್ಲಿ ದೇವದತ್ತನಿಗಾಗಿ ಒಂದು ವಿಹಾರವನ್ನು ಕಟ್ಟಿಸಿಕೊಟ್ಟನು. ದೇವದತ್ತನು ಹಿಂದೆಯೇ ಹಂಚಿಕೆ ಹಾಕಿಕೊಂಡಿದ್ದ ಹಾಗೆ ಐನೂರು ಶಿಷ್ಯರನ್ನು ಸಂಪಾದಿಸಿದನು. ಅವರಿಗೆಲ್ಲ ಬೇಕಾದ ಅನ್ನವಸ್ತ್ರಗಳನ್ನು ಅಜಾತಶತ್ರು ಒದಗಿಸಿದನು.

ರಾಜಗೃಹದಲ್ಲಿ ನಡೆದ ಈ ಇದನ್ನೆಲ್ಲಾ ಕಕುಧನೆಂಬ ದೇವತೆ ಕೌಶಾಂಬಿಯಲ್ಲಿದ್ದ ಮಹಾ ಮೌದ್ಗಲ್ಯಾಯನನಿಗೆ ತಿಳಿಸಿತು. ಮೌದ್ಗಲ್ಯಾಯನನು, ಆ ವಿಚಾರವನ್ನು ಭಗವಂತನಿಗೆ ಅರಿಕೆ ಮಾಡಿದನು.

ಅದನ್ನು ಕೇಳಿ, ಭಗವಂತನೆಂದನು: "ವರಾಹವು ಭೂಮಿಯನ್ನು ಅಗೆಯುತ್ತದೆ, ಮಣ್ಣನ್ನು ತಿನ್ನುತ್ತದೆ; ಆನೆಯೂ ಅದನ್ನೇ ಮಾಡಲು ತೊಡಗುತ್ತದೆ, ಆದರೆ ಅದರ ಮೈಯುಬ್ಬರಿಸಿಕೊಂಡು ಅದು ಸಾಯುತ್ತದೆ. ಹಾಗೆಯೇ ಈ ದೇವದತ್ತನಾದರೂ, ನನ್ನನ್ನು ಅನುಕರಿಸುವುದಕ್ಕೆ ಹೋಗಿ ಅನ್ಯಾಯವಾಗಿ ಹಾಳಾಗುತ್ತಾನೆ."

ಕೆಲವು ಕಾಲವಾದ ಮೇಲೆ ಭಗವಂತನು ತನ್ನ ಭಿಕ್ಷುಸಂಘದೊಡನೆ ರಾಜಗೃಹಕ್ಕೆ ಹೋದನು. ಅವನ ಸಂದರ್ಶನಕ್ಕೆಂದು ದೇವದತ್ತನೂ ಅವನ ಐನೂರು ಶಿಷ್ಯರೂ ಬಂದರು.

ದೇವದತ್ತ ಹೇಳಿದ: "ರಾಜರು ಇದ್ದ ಕಡೆ ಯುವರಾಜರು ಎಂದು ಇರುವುದುಂಟು. ಈಗ ನೀನು ಧರ್ಮರಾಜನಾಗಿದ್ದೀಯೆ. ಇಲ್ಲಿಗೂ ಒಬ್ಬ ಯುವರಾಜ ಬೇಕು. ಆ ಸ್ಥಾನಕ್ಕೆ ನನ್ನನ್ನು ನೇಮಿಸಬೇಕು."

ಅದಕ್ಕೆ ಭಗವಂತನೆಂದ: "ಈ ಧರ್ಮರಾಜ್ಯವನ್ನು ನಡೆಸಿಕೊಂಡು ಹೋಗುವುದಕ್ಕೆ ನನ್ನ ಪ್ರಧಾನಶಿಷ್ಯರಾದ ಸಾರಿಪುತ್ರ ಮೌದ್ಗಲ್ಯಾಯನರು ಇದ್ದಾರೆ. ಆನೆಯ ಭಾರವನ್ನು ಎಳೆಯುವುದಕ್ಕೆ ಆನೆಯೇ ಬೇಕು."

ದೇವದತ್ತನಿಗೆ ಮುಖಭಂಗವಾಯಿತು. ಏನೂ ಉತ್ತರ ಕೊಡಲಾರದೆ, ಉರಿದುರಿದು ಬೀಳುತ್ತ ಎದ್ದು ಹೊರಟುಹೋದ.

ಒಂದು ದಿವಸ, ದೇವದತ್ತ ತನ್ನ ಮಿತ್ರನಾದ ಅಜಾತಶತ್ರುವಿಗೆ ಹೇಳಿದ: "ಹಿಂದಿನ ಕಾಲದಲ್ಲಿ ಜನರಿಗೆ ಆಯುಸ್ಸು ಪೂರ್ಣವಾಗಿರುತ್ತಿತ್ತು. ಆದರೆ, ಈಗ ಯಾರು ಎಷ್ಟು ಕಾಲ ಬದುಕುವರೆಂದು ನಿಶ್ಚಯವಾಗಿ ಹೇಳುವಂತಿಲ್ಲ. ಮಿತ್ರಾ, ನೀನು ಎಷ್ಟುಕಾಲ ರಾಜ್ಯಭಾರ ಮಾಡುವೆಯೆಂಬುದನ್ನು ಯಾವ ಧೈರ್ಯದಿಂದ ಹೇಳಬಹುದು? ಆದ್ದರಿಂದ, ನೀನು ನಿನ್ನ ತಂದೆಯನ್ನು ಕೊಂದು ಕಳೆದು, ಮಗಧದ ರಾಜನಾಗು; ನಾನು ಬುದ್ಧನನ್ನು ಕೊಂದು ಕಳೆದು, ಧರ್ಮರಾಜನಾಗುತ್ತೇನೆ."

ಅವಿವೇಕಿಯಾದ ಅಜಾತಶತ್ರು ಅವನ ಮಾತಿಗೆ ಒಪ್ಪಿದ. ತಂದೆಯನ್ನು ಕೊಲ್ಲುವೆನೆಂದು ಕೈಯಲ್ಲಿ ಈಟಿ ಹಿಡಿದು ಹೋದವನು, ದೊರೆಯು ಎದುರಿಗೆ ಬಂದಾಗ ಗಡಗಡನೆ ನಡುಗುತ್ತ ನಿಂತ. ಅವನ ಕೈಯ್ಯ ಆಯುಧವೂ ಅವನ ಮೈಯ ನಡುಕವೂ ಅವನ ಮನಸ್ಸಿನ ದುರುದ್ದೇಶವನ್ನು ಸ್ಪಷ್ಟವಾಗಿ ಡಂಗುರ ಹಾಕುತ್ತಿದ್ದುವು.

"ಇದೇಕೆ ಹೀಗೆ ಬಂದೆ, ಮಗುವೆ?" ಎಂದು ಬಿಂಬಿಸಾರ ಕೇಳಿದ.

"ನನಗೆ ರಾಜ್ಯ ಬೇಕು. ನಾನು ರಾಜನಾಗಬೇಕು."

"ಅದಕ್ಕೆ ಇಷ್ಟೇಕೆ ಉದ್ವೇಗ, ಮಗುವೆ? ಇದೋ ರಾಜ್ಯವೆಲ್ಲ ನಿನ್ನದೇ." ಎಂದು ಬಿಂಬಿಸಾರನು, ಪರಿವಾರವನ್ನು ಕರೆದು, ಅಜಾತಶತ್ರುವಿನ ಅಭಿಷೇಕಕ್ಕೆ ಸನ್ನಾಹಗಳನ್ನು ಏರ್ಪಡಿಸಲು ಆಜ್ಞೆಮಾಡಿದನು.

ಅಜಾತಶತ್ರು ತಾನು ಪಡೆದ ರಾಜ್ಯಾಧಿಕಾರವನ್ನು ಪರಮಸಂತೋಷದಿಂದ ದೇವದತ್ತನಲ್ಲಿ ಹೇಳಿಕೊಂಡನು. ದೇವದತ್ತನು ಅವನ ಕೃತ್ಯಕ್ಕೆ ಮೆಚ್ಚಲಿಲ್ಲ.

"ನೀನು ಶುದ್ಧ ಅವಿವೇಕಿ. ಬಿಂಬಿಸಾರನು ನಿನಗೆ ಈಗ ರಾಜ್ಯವನ್ನು ಒಪ್ಪಿಸಿದರೂ, ಅವನು ಬದುಕಿರುವ ತನಕ ಎಂದು ಬೇಕಾದರೂ ಅದನ್ನು ಮತ್ತೆ ಕಿತ್ತುಕೊಳ್ಳಬಲ್ಲನು. ಆದ್ದರಿಂದ ರಾಜ್ಯ ನಿನ್ನ ಕೈಯಲ್ಲಿ ಭದ್ರವಾಗಿರಬೇಕಾದರೆ, ನೀನು ಅವನನ್ನು ಕೊಲ್ಲುವುದು ಒಂದೇ ಸರಿಯಾದ ದಾರಿ." ಎಂದು ದುರ್ಬೋಧನೆಮಾಡಿದನು.

"ಅವನನ್ನು ಅಸ್ತ್ರಶಸ್ತ್ರಗಳಿಂದ ಕೊಲ್ಲುವುದು ನಿನ್ನ ಕೈಲಾಗದು. ಆದ್ದರಿಂದ ಅವನನ್ನು ಸೆರೆಯಲ್ಲಿ ನೂಕಿಬಿಡು. ಅನ್ನಾಹಾರಗಳಿಲ್ಲದೆ ಅಲ್ಲೇ ನರಳಿ ನರಳಿ ಸಾಯಲಿ." ಎಂದು ಕೆಟ್ಟ ಮಂತ್ರವನ್ನು ಕಿವಿಯಲ್ಲಿ ಊದಿದನು.

ಮೊದಲೇ ಬುದ್ಧಿಯಿಲ್ಲದ್ದು; ಅದಕ್ಕೆ ಮಂಕುಬೂದಿ ತಳಿದರೆ, ಕೇಳಬೇಕೆ? ಅಜಾತಶತ್ರು ಹೇಗೆ ತನ್ನ ತಂದೆಯನ್ನು ನಿಷ್ಕರುಣೆಯಾಗಿ ಕೊಂದ, ಎಂಬುದನ್ನು ಈಗ ತಾನೆ ಹೇಳಿದ್ದೇನೆ.

ಬಿಂಬಿಸಾರನು ಸೆರೆಯಲ್ಲಿ ಸತ್ತ ವಾರ್ತೆ ಬರುವುದಕ್ಕೆ ಕೊಂಚ ಮುಂಚಿತವಾಗಿ, ಅಜಾತಶತ್ರುವಿಗೆ ಪುತ್ರೋತ್ಸವವಾದ ಸಂತೋಷದ

ಸುದ್ದಿ ಬಂದಿತ್ತು. ಅದರಿಂದ ಅವನ ಮನಸ್ಸಿನಲ್ಲಿ ಸ್ವಲ್ಪ ಮಾರ್ದವ ಮೂಡಿ, ತಂದೆಯ ಮೇಲೆ ಮಮತೆ ತಲೆದೋರಿತ್ತು. ಆದರೆ, ಆ ವೇಳೆಗೆ ಕಾರ್ಯ ಮಿಂಚಿಹೋಗಿತ್ತು. ಅಜಾತಶತ್ರು ತಾನು ಮಾಡಿದ ಅಕಾರ್ಯಕ್ಕಾಗಿ ಪರಿತಾಪಪಡುತ್ತ, ತಾಯಿಯ ಬಳಿ ಹೋಗಿ ಕಣ್ಣೀರು ಸುರಿಸುತ್ತ ಕ್ಷಮೆ ಕೇಳಿಕೊಂಡ.

ಆಗ ಆ ತಾಯಿ, ಈ ಮಗನ ಮೇಲೆ ಆ ತಂದೆಗೆ ಎಷ್ಟು ಮಟ್ಟಿನ ಪ್ರೇಮ ಇತ್ತೆಂಬುದಕ್ಕೆ ಒಂದು ನಿದರ್ಶನ ಹೇಳಿದಳು : ಅಜಾತಶತ್ರು ಸಣ್ಣ ಮಗುವಾಗಿದ್ದಾಗ, ಅವನ ಒಂದು ಬೆರಳಿನ ಮೇಲೆ ಒಂದು ಗುಳ್ಳೆ ಎದ್ದು ತುಂಬ ಬಾಧೆ ಕೊಡುತ್ತಿದ್ದಿತಂತೆ. ಮಗುವಿಗೆ ಆಗುತ್ತಿದ್ದ ಬಾಧೆಯನ್ನು ಕಡಿಮೆ ಮಾಡುವುದಕ್ಕಾಗಿ ದೊರೆ ಆ ಬೆರಳನ್ನು ತನ್ನ ಬಾಯಲ್ಲಿರಿಸಿಕೊಂಡು ಶಾಖ ಕೊಡುತ್ತಿದ್ದನಂತೆ. ಮಗುವಿಗೆ ಅದರಿಂದ ಸ್ವಲ್ಪ ಶಮನವಾಯಿತಂತೆ ಆ ಸಂದರ್ಭದಲ್ಲಿ ಗುಳ್ಳೆ ಒಡೆದು, ಅದರ ಕೀವು ಸೋರಿದರೂ, ದೊರೆ ಮಗುವಿನ ಮೇಲಿನ ಮಮತೆಯಿಂದ ಅದನ್ನು ಸಹಿಸಿ ಕೊಂಡಿದ್ದನಂತೆ.

ಅಜಾತಶತ್ರುವಿಗೆ ತನ್ನ ಅಕಾರ್ಯದ ಅರಿವಾದರೂ, ಸತ್ತ ತಂದೆಯನ್ನು ಬದುಕಿಸುವುದು ಎಲ್ಲಿ?

ಇಷ್ಟಾದರೂ ಅಜಾತಶತ್ರುವಿಗೆ ದೇವದತ್ತನ ಪ್ರಭಾವದಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಇವನು ಬಿಂಬಿಸಾರನನ್ನು ಕೊಲ್ಲುವುದು, ಅವನು ಬುದ್ಧನನ್ನು ಕೊಲ್ಲುವುದು, ಎಂದಲ್ಲವೇ ಗೊತ್ತಾಗಿದ್ದದ್ದು? ಈಗ ಮೊದಲನೆಯದು ಮುಗಿದಿತ್ತು, ಇನ್ನು ಎರಡನೆಯದು ಆಗಬೇಕು.

ದೇವದತ್ತನು ಬುದ್ಧನ ಸಂಹಾರವನ್ನು ಸಾಧಿಸಲು ಐದುನೂರು ಜನ ಬಿಲ್ಗಾರರ ಸಹಾಯವನ್ನು ಕೋರಿದನು. ದೊರೆಯ ಸೈನ್ಯದಿಂದ ಅಷ್ಟು ಜನ ಒದಗಿದರು. ದೇವದತ್ತನು ಅವರಲ್ಲಿ ಮೂವತ್ತೊಂದು ಜನ ಸಮರ್ಥರಾದವರನ್ನು ಆರಿಸಿಕೊಂಡನು. ಅವರ ಮುಖಂಡನೊಬ್ಬನನ್ನು ಮಾತ್ರ ಏಕಾಂತದಲ್ಲಿ ಕರೆದು, "ಬುದ್ಧನು ಗೃಧ್ರಕೂಟ ಪರ್ವತದ ವಿಹಾರದಲ್ಲಿ ಶತಪಡ ತಿರುಗುತ್ತಿರುವಾಗ ಅವನನ್ನು ಬಾಣದಿಂದ ಕೊಂದರೆ,

ನಿನಗೆ ಅಧಿಕವಾದ ಪಾರಿತೋಷಕ ಕೊಡುತ್ತೇನೆ" ಎಂದು ಅವನನ್ನು ಆ ಕೊಲೆಗೆ ಒಪ್ಪಿಸಿದನು. ಅನಂತರ ಈ ಮುಖಂಡನನ್ನು ಕೊಲ್ಲುವಂತೆ ಇನ್ನಿಬ್ಬರನ್ನು ಒಪ್ಪಿಸಿ, ಆ ಇಬ್ಬರನ್ನು ಕೊಲ್ಲುವಂತೆ ಮತ್ತೆ ನಾಲ್ವರನ್ನು ಒಪ್ಪಿಸಿ, ಆ ನಾಲ್ವರನ್ನು ಕೊಲ್ಲಲು ಮತ್ತೆ ಎಂಟು ಜನಕ್ಕೆ ರಹಸ್ಯವಾಗಿ ಹೇಳಿ, ಆ ಎಂಟು ಜನರನ್ನು ಕೊಲ್ಲಲು ಉಳಿದ ಹದಿನಾರು ಬಿಲ್ಗಾರರನ್ನು ನೇಮಿಸಿ, ಕಡೆಗೆ ಆ ಹದಿನಾರು ಜನರನ್ನೂ ತಾನೇ ತನ್ನ ಕೈಯಾರೆ ಕೊಂದು ಬುದ್ಧನ ಕೊಲೆಯಾದುದಕ್ಕೆ ಒಂದಾದರೂ ಸಾಕ್ಷಿ ಉಳಿಯದಂತೆ ಮಾಡಬೇಕೆಂದು ಕಟ್ಟುನಿಟ್ಟಿನ ಏರ್ಪಾಟು ಮಾಡಿಕೊಂಡನು.

ಅದೇ ದಿನ ಬೆಳಗಿನ ಜಾವದಲ್ಲಿ, ಭಗವಂತನು ತನ್ನ ಎಂದಿನ ಪದ್ಧತಿಯಂತೆ, ಸಮಸ್ತ ಲೋಕವನ್ನೂ ಅವಲೋಕಿಸುತ್ತ, ತನ್ನ ಕೊಲೆಗೆಂದು ದೇವದತ್ತನು ಆಯ್ದುಕೊಂಡಿದ್ದ ಮೂವತ್ತೊಂದು ಜನ ಬಿಲ್ಗಾರರನ್ನು ಕಂಡನು. ತಪ್ಪುದಾರಿಯಲ್ಲಿ ನಡೆದುಹೋಗುತ್ತಿರುವವರಿಗೆ ತನ್ನೊಂದು ಅವಲೋಕನವೇ ಉದ್ಧಾರಕ್ಕೆ ನೆರವಾಗುವುದೆಂದುಕೊಂಡು, ಭಗವಂತನು ಆ ಬಿಲ್ಗಾರರ ಮುಖಂಡನನ್ನು ಎದುರುನೋಡುತ್ತ ಗೃಧ್ರಕೂಟದ ವಿಹಾರದಲ್ಲಿ ಠಕ್ಕನೆ ತಿರುಗುತ್ತಿದ್ದನು.

ಬಂದವನು ಆ ಮುಖಂಡ, ಬಿಲ್ಲಿಗೆ ಬಾಣವನ್ನು ಹೂಡಿ ಬುದ್ಧನ ಕಡೆಗೆ ಇನ್ನೇನು ಬಿಡಬೇಕು ; ಅದರೆ, ತಾಯಿಯಾದವಳು ತನ್ನ ಒಂದೇ ಮಗುವಿನ ಮೇಲೆ ಎಂತಹ ದಯೆಯನ್ನು ತೋರುವಳೋ ಅಂತಹ ದಯೆಯಿಂದ ತುಂಬಿ ತುಳುಕುತ್ತಿದ್ದ ಭಗವಂತನ ದೃಷ್ಟಿಗೆ ಸಿಕ್ಕಿ, ಅವನು ಬಾಣಗಳನ್ನು ಬಿಸುಟು, ಭಗವಂತನ ಕಾಲಿಗೆ ಬಿದ್ದು, ಆತನಿಂದ ಧರ್ಮವನ್ನು ಕೇಳಿ ತಿಳಿದುಕೊಂಡನು. ಬುದ್ಧನ ಕ್ಷಮೆಯನ್ನು ಪಡೆದು, ಬೇರೆ ಮಾರ್ಗವಾಗಿ ರಾಜಗೃಹಕ್ಕೆ ಇಳಿದು ಹೋದನು.

ಸ್ವಲ್ಪ ಹೊತ್ತಿನ ಮೇಲೆ, ಆ ಮುಖಂಡನನ್ನು ಕೊಲ್ಲಬೇಕೆಂದು ನೇಮಕರಾಗಿದ್ದ ಇಬ್ಬರು ಬಿಲ್ಗಾರರು ಬಂದರು. ಅವರು ಕೂಡ, ಭಗವಂತನ ಕೃಪಾದೃಷ್ಟಿಯಿಂದ ಪವಿತ್ರರಾಗಿ, ತಮ್ಮ ಹೇಯಕಾರ್ಯಕ್ಕಾಗಿ ಅಸಹ್ಯಪಟ್ಟು, ಧರ್ಮವನ್ನು ಕೇಳಿಕೊಂಡು, ಶರಣರಾಗಿ, ಬೇರೆ ದಾರಿಯಿಂದ ತಾವೂ ರಾಜಗೃಹಕ್ಕೆ ಹೋದರು.

ಅನಂತರ ಆ ನಾಲ್ವರು, ಅಮೇಲೆ ಆ ಎಂಟು ಜನ, ಕೊನೆಗೆ ಆ ಹದಿನಾರು ಮಂದಿ, ಒಬ್ಬರು ಬಂದು ಹೋದ ಸ್ವಲ್ಪಹೊತ್ತಿನ ಮೇಲೆ ಒಬ್ಬರು ಗುಂಪಾಗಿ ಬಂದರು. ಭಗವಂತನ ದಯೆ ಅವರ ಹೃದಯವನ್ನೂ ಪರಿವರ್ತಿಸಿತು. ಅವರೂ ಧರ್ಮವನ್ನು ಕಿವಿಯಾರೆ ಕೇಳಿ, ಎದೆಯಾರೆ ತಾಳಿ, ಶರಣರಾಗಿ, ರಾಜಗೃಹಕ್ಕೆ ಮರಳಿದರು. ದೇವದತ್ತನು ಮಾಡಿದ ಹಂಚಿಕೆ ಸಾರ್ಥಕವಾಗಲಿಲ್ಲ.

"ಅವರಿವರನ್ನು ನಂಬಿದರೆ, ನನ್ನ ಶತ್ರು ನಾಶವಾಗುವುದಿಲ್ಲ. ಇದಕ್ಕೆ ನಾನೇ ನೇರವಾಗಿ ಯತ್ನಿಸಬೇಕು" ಎಂದು ದೇವದತ್ತನು ಇನ್ನೊಂದು ಅಕಾರ್ಯವನ್ನು ಚಿಂತಿಸಿದನು. ಗೃಧ್ರಕೂಟದಿಂದ ಭಗವಂತನು ಇಳಿಯುತ್ತಿರುವ ಹೊತ್ತಿನಲ್ಲಿ, ದೇವದತ್ತನು ಮೇಲಿನ ಒಂದು ಕೋಡುಗಲ್ಲಿನ ಬಳಿ ಹೊಂಚುತ್ತಿದ್ದು, ತಾನು ಸಿದ್ಧಪಡಿಸಿಕೊಂಡಿದ್ದ ಯಂತ್ರದ ಸಹಾಯದಿಂದ ದೊಡ್ಡ ಬಂಡೆಯೊಂದನ್ನು ಎಸೆದನು. ಅದೇನು ಅವನ ಆಯುವೇ ತಪ್ಪಿತೋ, ಅಥವಾ ಬೌದ್ಧರು ಹೇಳುವಂತೆ ಅದು ಬುದ್ಧನ ಮೈತ್ರಿಯ ಪ್ರಭಾವವೇ ಹೌದೋ, ಅಂತೂ ಆ ಬಂಡೆ ಬುದ್ಧನ ಮೇಲೆ ಬೀಳದೆ. ಮಾರ್ಗದಲ್ಲಿನ ಬೇರೆ ಬಂಡೆಗೆ ತಗುಲಿ ಚೂರು ಚೂರಾಯಿತು. ಆದರೆ, ಅದರಿಂದ ಸಿಡಿದ ಚೂರುಗಳಲ್ಲಿ ಒಂದು ಭಗವಂತನಿಗೆ ತಾಗದೆ ಇರಲಿಲ್ಲ. ಆ ಚೂರು ಕಾಲಿನ ಬೆರಳಿಗೆ ತಾಗಿ, ಗಾಯವಾಗಿ, ವ್ರಣವಾಗಿ, ಭಗವಂತನು ಬಹುವಾಗಿ ಬಾಧೆಪಟ್ಟನು. ಆಗಲೇ ಜೀವಕನು ಆ ವ್ರಣವನ್ನು ಶಸ್ತ್ರದಿಂದ ಕುಯಿದು, ಅದರೊಳಗಿನ ಕೀವು ರಕ್ತಗಳನ್ನು ಕಳೆದು, ಬಾಧೆಯನ್ನು ಶಮನಮಾಡಿ ಗುಣಪಡಿಸಿದ್ದು.

ದೇವದತ್ತನಿಗೆ ಮನುಷ್ಯರಲ್ಲಿ ನಂಬಿಕೆ ತಪ್ಪಿತೆಂದು ತೋರುತ್ತದೆ; ಬುದ್ಧನನ್ನು ಕೊಲೆಮಾಡಲು ಅವನು ಮೃಗಗಳನ್ನು ಆಶ್ರಯಿಸಿದನು.

ಅಜಾತಶತ್ರುವಿನ ಅರಮನೆಯಲ್ಲಿ ಒಂದು ಆನೆ, ನಾಲಾಗಿರಿಯೆಂದು ಅದರ ಹೆಸರು. ಪರ್ವತಾಕಾರವಾಗಿ, ಮಹಾಚಂಡವಾಗಿ, ದುರ್ನಿವಾರ್ಯವಾಗಿತ್ತು. ಅದಕ್ಕೆ ಪ್ರತಿದಿನ ಎಂಟು ಅಳತೆ ಮದ್ಯವನ್ನು ಕುಡಿಸುತ್ತಿದ್ದ

ರಂತೆ, ಅದರ ಮದವನ್ನು ಹೆಚ್ಚಿಸುವುದಕ್ಕೆ. ಒಂದು ದಿನ ದೇವದತ್ತನು ಆ ಆನೆಗೆ ಹದಿನಾರು ಅಳತೆ ಮದ್ಯವನ್ನು ಕುಡಿಸಿ, ಬುದ್ಧನು ಭಿಕ್ಷೆಗೆ ಹೋಗಿ ಬರುವ ದಾರಿಯಲ್ಲಿ ಬಿಡಬೇಕೆಂದುಕೊಂಡು, ಅದಕ್ಕೆ ಅರಸನ ಸಹಾಯವನ್ನು ಕೇಳಿದನು. ಅಜಾತಶತ್ರು ದೇವದತ್ತನು ಕೇಳಿದ್ದಕ್ಕೆ ಇಲ್ಲೆನ್ನಲಾರದೆ ಒಪ್ಪಿದರೂ, ಆ ದಿವಸ ನಗರದ ಜನರು ಯಾರೂ ಬೀದಿಗಳಲ್ಲಿ ತಿರುಗಾಡಕೂಡದೆಂದು ಡಂಗುರ ಹಾಕಿಸಿದನು. ಡಂಗುರದ ಕಾರಣವೇನೆಂಬುದನ್ನು ತಿಳಿದವರು ಕೆಲವರು ಉಪಾಸಕರು ಭಗವಂತನ ಬಳಿಗೆ ಓಡಿ, ಬುದ್ಧನನ್ನು ಆ ದಿನ ಭಿಕ್ಷೆಗೆ ಹೋಗಬೇಡವೆಂದು ಬೇಡಿದರು; ಬೇಕಾದುದನ್ನೆಲ್ಲ ತಾವೇ ತಂದುಕೊಡುವೆವೆಂದು ಹೇಳಿದರು. ಆದರೆ, ಭಗವಂತನು ಅವರನ್ನು ಸಮಾಧಾನಪಡಿಸಿ, ಧೈರ್ಯದಿಂದಿರ ಹೇಳಿ, ತಾನು ಎಂದಿನಂತೆ ಭಿಕ್ಷೆಗೆ ಹೊರಟೇ ಹೊರಟನು. ಜೊತೆಗೆ ಆನಂದ; ಜೊತೆಗೆ, ಸುತ್ತಿನ ಹದಿನೆಂಟು ವಿಹಾರಗಳ ಶ್ರಮಣರೆಲ್ಲರೂ. ನಗರವಾಸಿಗಳೆಲ್ಲರೂ ಬುದ್ಧನಿಗೆ ಆದವರೂ ಆಗದವರೂ ನಗರದ ನಡುವಿನ ತಿಟ್ಟಿನ ಮೇಲೆ ಹತ್ತಿ ನಿಂತರು. ತಮ್ಮ ಗುರುವಿನ ವಿಜಯವನ್ನು ಬಯಸುತ್ತ ನಿಂತವರು ಕೆಲವರು; ತಮಗೆ ಆಗದವನು ಈ ದಿನ ಆನೆಯ ಕಾಲಿಗೆ ಸಿಕ್ಕಿ ಹತನಾಗಿಹೋಗುವನೆಂದು ಇನ್ನು ಕೆಲವರು.

ಭಗವಂತನು ಮಾತ್ರ ಆ ದಿನ ಕೂಡ ಎಂದಿನ ಹಾಗೆಯೇ ಎಂದು ನಿಶ್ಚಿಂತೆಯಿಂದ ತಾನು ಬರುವ ಹೊತ್ತಿಗೆ ಸರಿಯಾಗಿ ತಪ್ಪದೆ ಬಂದನು. ಆ ಮಾರ್ಗವನ್ನು ಪ್ರವೇಶಿಸಿದ ಸ್ವಲ್ಪ ವೇಳೆಯಲ್ಲಿ, ದೇವದತ್ತನ ದುರ್ಮಂತ್ರದ ಪ್ರಕಾರ, ಮದ್ಯ ಕುಡಿದು ಮದವೇರಿದ್ದ ನಾಲಾಗಿರಿ ಆನೆಯನ್ನು ಬುದ್ಧನಿಗೆ ಎದುರಾಗಿ ಬಿಚ್ಚಿ ಬಿಟ್ಟರು. ಅದು ಎಡಬಲದ ಮನೆಗಳನ್ನು ತಿವಿದು ಮುರಿದು ಪುಡಿಪುಡಿ ಮಾಡುತ್ತ, ಸೊಂಡಿಲನ್ನು ಮೇಲೆತ್ತಿ ಭಯಂಕರವಾಗುವಂತೆ ಕೂಗುತ್ತ, ಕಿವಿಗಳನ್ನು ಪಟಪಟ ಹೊಡೆಯುತ್ತ, ನಡೆದಾಡುವ ದೊಡ್ಡ ಬಂಡೆಯಂತೆ ನೇರವಾಗಿ ನುಗ್ಗುತ್ತ ಬಂತು.

ಆನೆ ಎದುರಾಗಿ ಬಂದರೂ ಬುದ್ಧನ ನಡಿಗೆ ಬದಲಾಗಲಿಲ್ಲ. "ಆನೆಗೆ ನಿನ್ನ ಮಹಿಮೆ ಏನು ಗೊತ್ತಾಗುತ್ತದೆ? ಅಲ್ಲದೆ, ಅದು ಮದ್ಯ

ವನ್ನು ಕುಡಿದು ಅದಕ್ಕೆ ಮದವೇರಿದೆ. ಆದ್ದರಿಂದ ಈಚೆ ಅಲುಗಾಗು ವುದು ವಾಸಿ" ಎಂದು ಜೊತೆಯ ಶ್ರಮಣರು ಎಷ್ಟೋ ಹೇಳಿದರು. ಬುದ್ಧನು ಅವರಿಗೆ ಹೆದರಬೇಡಿರೆಂದು ಹೇಳಿದನೇ ಹೊರತು. ತಾನು ಹಿಮ್ಮೆಟ್ಟಲಿಲ್ಲ.

ಯಾರುಯಾರು ಹೇಳಿದರೂ ಬುದ್ಧನು ಕದಲದಿದ್ದುದನ್ನು ಕಂಡು, ಆನಂದನು ಆನೆಯ ಕೋಪಕ್ಕೆ ತಾನು ಪಾತ್ರನಾಗಿ, ಗುರುವನ್ನು ಉಳಿಸುವೆನೆಂದು ಮುಂದೆ ನಡೆದನು. ಗುರು ಅವನನ್ನು ಹಿಡಿದು ಹಿಂದಕ್ಕೆ ನಿಲ್ಲಿಸಿಕೊಂಡು, ತಾನು ಮುಂದೆ ನಡೆದನು.

ಆ ವೇಳೆಗೆ ಯಾವುದೋ ಒಂದು ಅರಿಯದ ಮಗು ಬೀದಿಯಲ್ಲಿ ಓಡಿಬಂತು. ಅದನ್ನು ಉಳಿಸಬೇಕೆಂದು ಅದರ ತಾಯಿ ಅದರ ಹಿಂದೆ ಓಡಿ ಬಂದಳು. ಆನೆ ಅವಳ ಕಡೆಗೆ ತಿರುಗಿ, ಇನ್ನೇನು—ಸೊಂಡಿಲಿನಿಂದ ಅವಳನ್ನು ಸುತ್ತಿ ಎತ್ತಬೇಕು ಎನ್ನುವ ಹೊತ್ತಿಗೆ ಬುದ್ಧನು ಸಿಂಹನಾದ ಮಾಡಿದನು.

"ನಾಲಾಗಿರಿ! ಹದಿನಾರು ಅಳತೆ ಮದ್ಯವನ್ನು ಕುಡಿಸಿ, ನಿನ್ನನ್ನು ಇಲ್ಲಿಗೆ ಓಡಿಸಿರುವುದು—ನೀನು ನನ್ನನ್ನು ಧ್ವಂಸಮಾಡಲಿ ಎಂದೇ ಹೊರತು, ಅರಿಯದ ಹೆಂಗಸರು ಮಕ್ಕಳ ಮೇಲೆ ಸೊಂಡಿಲು ಎತ್ತುವುದಕ್ಕಲ್ಲ! ಅವರ ಗೋಜಿಗೆ ಹೋಗಬೇಡ!"

ಬುದ್ಧನ ಧ್ವನಿಯನ್ನು ಕೇಳಿ, ನಾಲಾಗಿರಿ ಅವನ ಕಡೆಗೆ ತಿರುಗಿತು. ಬುದ್ಧನ ದೃಷ್ಟಿಯ ದಯೆಯು ಆ ಆನೆಯ ಮೈಯನ್ನು ಮೃದುವಾಗಿ ಸವರಿತು. ಮದ್ಯದಿಂದ ಆಗಿದ್ದ ಮದವೆಲ್ಲ ಒಂದು ಕ್ಷಣದಲ್ಲಿ ಮಾಯವಾಯಿತು. ಚಂಡವಾಗಿದ್ದ ಆನೆ ಸಾಧುವಾಗಿ, ಬುದ್ಧನ ಪಾದಗಳ ಬಳಿಗೆ ಬಂದು ಕಾಲೂರಿ ನಮಿಸಿತು. ಸೊಂಡಿಲಿನಿಂದ ಆತನ ಕಾಲಿನ ಧೂಳನ್ನು ಮೂರು ಸಲ ಎತ್ತಿಕೊಂಡು, ತನ್ನ ತಲೆಯ ಮೇಲೆ ಹಾಕಿಕೊಂಡಿತು.

"ನಾಲಾಗಿರಿ! ಇನ್ನು ಮುಂದೆ ಎಂದಿಗೂ ಯಾರನ್ನೂ ದ್ವೇಷಿಸಬೇಡ. ಎಲ್ಲರನ್ನೂ ಪ್ರೀತಿಯಿಂದ ಕಾಣು." ಎಂದನು, ಬುದ್ಧಗುರು. ಆನೆ ಆತನಿಗೆ ಮೂರು ಬಾರಿ ಪ್ರದಕ್ಷಿಣೆ ಮಾಡಿ, ಮತ್ತೆ ಎದುರಿಗೆ ಕಾಲೂರಿತು.

ಹೀಗೆ ನಾಲಾಗಿರಿಯ ಮದ, ಅದರ ರೋಷ ಇಳಿದುಹೋಯಿತು. ಆ ಅದ್ಭುತವನ್ನು ನೋಡುತ್ತಿದ್ದ ಜನ ಸಂತೋಷದಿಂದ ಜಯಜಯಕಾರ ಮಾಡುತ್ತಾ ಓಡಿಬಂದರು. ತಮ್ಮ ಮೈಮೇಲಿನ ಆಭರಣಗಳನ್ನೆಲ್ಲಾ ತೆಗೆದು ಆನೆಗೆ ಅದನ್ನು ತೊಡಿಸಿದರು. ಅಂದಿನಿಂದ ನಾಲಾಗಿರಿಗೆ "ಧನಪಾಲ" ಎಂದು ಹೆಸರಾಯಿತು.

ಮತ್ತೆಯೂ ಒಮ್ಮೆ, ದೇವದತ್ತನ ಅನುಚಿತವಾದ ಕಾರ್ಯ ಭಗವಂತನ ದಯಾದೃಷ್ಟಿಯಿಂದ ಭಂಗವಾಯಿತು.

ಇದಾದ ಕೆಲವು ದಿವಸಗಳ ಮೇಲೆಯೇ ಅಜಾತಶತ್ರು ತಂದೆಯ ಕೊಲೆಯಿಂದ ಮನಸ್ಸು ಕದಡಿಹೋಗಿ, ಜೀವಕನ ಸಲಹೆಯ ಪ್ರಕಾರ, ಬುದ್ಧನ ಸಂದರ್ಶನಕ್ಕೆ ಹೋದದ್ದು.

ಆ ದಿವಸ ತುಂಬು ಹುಣ್ಣಿಮೆ. ಆದರೆ ಅದರಿಂದ ಅಜಾತಶತ್ರುವಿಗೆ ಏನೂ ತಂಪಿನ ಅನುಭವವಿಲ್ಲ. ರಾತ್ರಿ ನಿದ್ರೆ ಬಾರದು. ಸುತ್ತಿನ ಪರಿವಾರದವರು ಅರಸನ ಕಳವಳಕ್ಕೆ ಕಾರಣ ಕೇಳುತ್ತಿದ್ದಾರೆ; ಅವನಿಗೋ ಹೇಳಿಕೊಳ್ಳುವುದಕ್ಕೆ ನಾಚಿಕೆ. ಮೈಯಲ್ಲೆಲ್ಲ ಸಾವಿರ ಶಸ್ತ್ರಗಳನ್ನು ಚುಚ್ಚಿದಂತೆ ಸಂಕಟ. ಹೇಳಿಕೊಳ್ಳಲಾರ, ಹೇಳಿಕೊಳ್ಳದೆ ಇರಲಾರ.

ಸುತ್ತ ನಿಂತ ಪರಿವಾರವನ್ನು ಕೇಳಿದ: "ಇಲ್ಲಿ ಯಾರಾದರೂ ಧರ್ಮ ಕಥೆಯನ್ನು ಮಾತನಾಡುವಂಥ ಗುರುಗಳಿದ್ದರೆ, ಅವರ ಬಳಿಗೆ ಹೋಗಿ ಬರೋಣವೆ?"

ಪ್ರತಿಯೊಬ್ಬನೂ ತನ್ನ ತನ್ನ ಗುರುವನ್ನು ಕೀರ್ತನೆಮಾಡಿದ. ಅರಸನಿಗೆ ಅವರ ಹೆಸರು ಕೇಳಿ, ಏನೂ ಉತ್ಸಾಹ ಉಂಟಾಗಲಿಲ್ಲ. ಮಾವಿನ ಹಣ್ಣು ಬೇಕೆಂದು ಬಾಯಿಬಿಡುವವನು ಬೇವಿನ ಹಣ್ಣಿನ ಹೆಸರು ಕೇಳಿದಹಾಗಾಯಿತು.

ಆ ಆಪ್ತ ಸಭೆಯಲ್ಲಿದ್ದವರು ಒಬ್ಬೊಬ್ಬರೂ ತಮತಮಗೆ ಬೇಕಾದವರನ್ನು ಹಾಡಿ ಹೊಗಳುತ್ತಿರಬೇಕಾದರೆ, ಆಸ್ಥಾನದ ವೈದ್ಯನಾದ ಜೀವಕ ಒಬ್ಬ ಮಾತ್ರ ಮಾತನಾಡದೆ ಮೌನದಿಂದ ಕುಳಿತಿದ್ದ. ದೇವದತ್ತನ ಪ್ರೇರಣೆಯಿಂದ ದೊರೆಗೆ ಬುದ್ಧನನ್ನು ಕಂಡರಾಗುವುದಿಲ್ಲವೆಂದು ಅವನಿಗೆ

ಗೊತ್ತು. ತಾನಾಗಿಯೇ ಬುದ್ಧನ ಹೆಸರನ್ನು ಹೇಳಿದರೆ, ಆ ಮಾತಿಗೆ ಬೆಲೆ ಬರುವುದಿಲ್ಲವೆಂದು ಅವನು ಸುಮ್ಮನಿದ್ದ. ಮಿಕ್ಕವರು ಯಾರಯಾರ ಹೆಸರು ಹೇಳುವರೋ, ಅವರ ಅರ್ಹತೆಯನ್ನು ದೊರೆ ತಾನೇ ತಿಳಿದು ಬರಲಿ, ಎಂದು ತೆಪ್ಪಗಿದ್ದ.

ದೊರೆಗೆ ಮಿಕ್ಕವರ ಮಾತು ಕೇಳಿ, ಬೇಸರವಾಯಿತು. ಇವರನ್ನು ಏಕೆ ಕೇಳಿದೆನೋ, ಎನ್ನಿಸಿತು. ಸದ್ಯಃ ಇವರು ಮಾತು ನಿಲ್ಲಿಸಿದರೆ ಸಾಕು, ಎನ್ನಿಸಿತು. ಆಗಲೇ ಅವನು ಮೌನದಿಂದ ಜೀವಕನ ಕಡೆಗೆ ತಿರುಗಿದ್ದ.

ಕೇಳಿದ: "ಜೀವಕ! ನೀನು ಏಕೆ ಏನೂ ಹೇಳುವುದಿಲ್ಲ? ಏನು ಅಸಮಾಧಾನ ನಿನಗೆ? ಯಾವ ಗುರುವಿನ ಧರ್ಮಕಥನದಿಂದ ನನ್ನ ಕಿವಿಗಳಿಗೆ ಸುಖವಾಗಿ, ನನ್ನ ಮನಸ್ಸಿಗೆ ಹಿತವಾದೀತು? ಹೇಳು, ಜೀವಕ."

ಈಗ ಮಾತನಾಡಲು ಸಕಾಲವಾಗಿದೆ, ಎಂದು ಜೀವಕನು ತನ್ನ ಪೀಠದಿಂದ ಎದ್ದು ಇಳಿದನು. ಬುದ್ಧಗುರು ತಂಗಿದ್ದ ವಿಹಾರದ ಕಡೆಗೆ ಮುಖಮಾಡಿ, ಭಯಭಕ್ತಿಗಳಿಂದ ಕೈ ಜೋಡಿಸಿ ತಲೆಯ ಮೇಲೆತ್ತಿ, ಬುದ್ಧನ ಗುಣಗಳನ್ನು ಗಾನಮಾಡತೊಡಗಿದನು.

"ದೊರೆಯೆ! ಭಗವಂತನು ಇಂತಹ ಕಲ್ಯಾಣಗುಣಗಳುಳ್ಳವನು. ಈಗ ಆ ಭಗವಂತನು ಇಲ್ಲಿಯೇ ನನ್ನ ಆಮ್ರವನದಲ್ಲಿ ತಂಗಿದ್ದಾನೆ. ಆತನ ಶಿಷ್ಯಸಂಘವೂ ಅಲ್ಲಿಯೇ ಇದೆ. ದುಃಖಕ್ಕೆ ಸಿಕ್ಕಿದವರು ಯಾರ ನ್ನಾದರೂ, ಎಷ್ಟು ಜನರನ್ನಾದರೂ ಆ ಗುರು ಸಂರಕ್ಷಿಸಬಲ್ಲ. ನೀನು ಇಷ್ಟಪಟ್ಟರೆ ಆತನನ್ನು ಸಂದರ್ಶಿಸಬಹುದು, ಮನಸ್ಸಿನ ಸಂದೇಹಗಳನ್ನು ಪರಿಹರಿಸಿಕೊಳ್ಳಬಹುದು. ಶಾಂತಿ ಸಮಾಧಾನಗಳನ್ನು ಸಂಪಾದಿಸಿ ಕೊಳ್ಳಬಹುದು."

ಭಗವಂತನೆಂಬ ಹೆಸರನ್ನು ಕೇಳಿಯೇ ಅಜಾತಶತ್ರುವಿಗೆ ಕರ್ಣಾ ನಂದವಾಯಿತು. ಜೀವಕನ ಮಾತುಗಳನ್ನು ಕೇಳುತ್ತ ರೋಮಾಂಚನ ವಾಯಿತು, ಧೈರ್ಯ ಬಂತು. ಕೂಡಲೆ ಭಗವಂತನ ದರ್ಶನ ಮಾಡ ಬೇಕೆಂಬ ಉತ್ಕಟೇಚ್ಛೆಯುಂಟಾಯಿತು. ಜೀವಕನೊಬ್ಬನನ್ನು ಮಾತ್ರ

ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದು ಎಷ್ಟು, ತನ್ನ ಆನೆಯ ರಥ ವನ್ನು ಸಿದ್ಧಮಾಡಿ ತರಹೇಳಿದನು. ಇನ್ನೂ ಅನೇಕವಾಗಿ ಕುದುರೆ ಹೂಡಿದ ರಥಗಳಿದ್ದರೂ, ಬುದ್ಧನಂಥ ಮಹಾನಾಗನನ್ನು ಸಂದರ್ಶಿಸಹೋಗುವಾಗ ಮಹಾನಾಗವನ್ನು ಹೂಡಿದ ರಥದಲ್ಲಿ ಹೋಗುವುದೇ ಹೆಚ್ಚು ಮರ್ಯಾದೆ, ಗಂಭೀರ ಗಮನಕ್ಕೆ ಆನೆಯ ರಥವೇ ತಕ್ಕದ್ದು, ಎಂದುಕೊಂಡನು.

ಜೀವಕ ಯೋಚಿಸಿದ: ಅಜಾತಶತ್ರು ತನ್ನ ಅಕಾರ್ಯಗಳಿಂದ ಅನೇಕ ಶತ್ರುಗಳನ್ನು ಉಂಟುಮಾಡಿಕೊಂಡಿದ್ದಾನೆ. ಆದ್ದರಿಂದ ಒಂಟಿಗನಾಗಿ ಇವನನ್ನು ಹೋಗಗೊಡುವುದು ಯುಕ್ತವಲ್ಲ. ಏನಾದರೂ ಅಚಾತುರ್ಯ ನಡೆದರೆ, ಅಪವಾದ ನನ್ನ ತಲೆಗೆ ಕಟ್ಟುತ್ತದೆ. ಆದ್ದರಿಂದ ರಾಜನಿಗೆ ತಕ್ಕ ರಕ್ಷಣೆಯಿರಬೇಕಾದ್ದು ಸೂಕ್ತ."

ಜೀವಕನು ಹೀಗೆಂದುಕೊಂಡು, ಪ್ರತಿದಿನದ ರಕ್ಷಕರ ಪಡೆಯಲ್ಲಿ ಕೂಡ ನಂಬಿಕೆ ಸಾಲದೆ, ಐದುನೂರು ಅಂತಃಪುರದ ಸ್ತ್ರೀಯರಿಗೆ ಪುರುಷ ವೇಷವನ್ನು ಹಾಕಿಸಿ, ಅವರ ಕೈಯ್ಯಲ್ಲಿ ಶಸ್ತ್ರಾಸ್ತ್ರಗಳನ್ನು ಕೊಟ್ಟನು. ಅವರೆಲ್ಲ ಆನೆಗಳನ್ನು ಏರಿ, ರಾಜನಿಗೆ ಕಾವಲಾಗಿ ಹೊರಟರು.

ಮತ್ತೆಯೂ ಜೀವಕ ಚಿಂತಿಸಿದ: "ಭಗವಂತನ ಧರ್ಮವನ್ನು ಕೇಳಿ ಅದರಿಂದ ಉದ್ಧಾರವಾಗುವ ಪುಣ್ಯವಿದ್ದವರ ಸಭೆಯಲ್ಲಿ ಮಾತ್ರ ಭಗವಂತನು ಧರ್ಮಕಥೆಯನ್ನು ನಡಸುತ್ತಾನೆ. ಆದರೆ ಈ ಅಜಾತ ಶತ್ರುವಾದರೋ ಇದುವರೆಗೆ ಬುದ್ಧನನ್ನು ದ್ವೇಷಿಸಿ, ತನ್ನ ತಂದೆಯನ್ನು ಕೊಂದು, ದೇವದತ್ತನ ಸ್ನೇಹಮಾಡಿ, ಪುಣ್ಯಕರ್ಮದಲ್ಲಿ ಹೀನನಾಗಿ ದ್ದಾನೆ. ಆದ್ದರಿಂದ ಈ ದೊರೆಯ ಪುಣ್ಯದ ಕೊರತೆಯನ್ನು ತುಂಬಿ ಕೊಡುವಂಥ ನಮ್ಮ ನಗರದ ಧಾರ್ಮಿಕರು ಇಂದಿನ ಸಭೆಯಲ್ಲಿ ಎಷ್ಟು ಹೆಚ್ಚಾದರೆ, ಅಷ್ಟು ಧರ್ಮಕಥೆ ಪೂರ್ಣವಾಗಿರುತ್ತದೆ, ಅದರಿಂದ ದೊರೆಗೆ ಮೇಲಾಗುತ್ತದೆ."

ಹಾಗೆಂದುಕೊಂಡು, ಜೀವಕನು ಕೂಡಲೆ ನಗರದಲ್ಲಿ ಹೀಗೆ ಡಂಗುರ ಹುಯಿಸಿದನು: "ದೊರೆಗಳು ಈ ರಾತ್ರಿ ರಾಜವೈಭವದಿಂದ ಭಗವಂತನ ಸಭೆಗೆ ತೆರಳುತ್ತಾರೆ. ಧರ್ಮಶ್ರವಣದಲ್ಲಿ ಆಸಕ್ತಿಯುಳ್ಳವರು ಯಾರಾದರೂ ಬರಬಹುದು."

ರಾಜನ ಪ್ರಯಾಣಕ್ಕೆ ನಿಯಮಿತವಾಗಿದ್ದ ವೇಳೆಗೆ ಭಕ್ತರ ಸಂದಣಿ ಬಹುವಾಗಿ ಸಿದ್ಧವಾಗಿತ್ತು. ಆನೆಯ ಮೇಲೆ ಪುರುಷವೇಷದಲ್ಲಿ ಕುಳಿತಿದ್ದ ಸ್ತ್ರೀ ಸೈನಿಕರು ಮಾತ್ರವಲ್ಲದೆ ಇತರ ಪದಾತಿಯೋಧರೂ ಅನೇಕಾನೇಕ ವೀರಬಿಲ್ಲಾರರೂ ನಡೆದರು. ಊರಿನಿಂದ ಸಾವಿರಾರು ಜನ ಕ್ಷತ್ರಿಯರೂ ವೈಶ್ಯರೂ ಬ್ರಾಹ್ಮಣರೂ ಹೊರಟರು. ಹೆಂಗಸರು ಮಂಗಳಗೀತೆಗಳನ್ನು ಹಾಡುತ್ತ ತಾವೂ ನಡೆದರು. ಮೆರವಣಿಗೆ ಹೀಗೆ ಹೊರಟು, ನಗರದ ಮೂವತ್ತೆರಡು ಮಹಾದ್ವಾರಗಳನ್ನೂ ಪಂಜುಗಳ ಬೆಳಕಿನಲ್ಲಿ ದಾಟಿ ಕೊಂಡು ಹೋಯಿತು.

ನಗರದ ಹೊರಗಿನ ಕೋಟೆಯ ಗೋಡೆಗೂ ಗೃಧ್ರಕೂಟ ಪರ್ವತದ ತಪ್ಪಲಿಗೂ ನಡುವೆ ಜೀವಕನ ಆಮ್ರವನವಿತ್ತು. ಕೋಟೆಯನ್ನು ದಾಟಿದ ಕೂಡಲೆ, ದೊರೆಯೊಡನೆ ಬರುತ್ತಿದ್ದ ವಾದ್ಯಗಳೂ ಹೆಂಗಸರ ಮಂಗಳಗೀತೆಗಳೂ ತಟಕ್ಕನೆ ನಿಂತುವು.

ದೊರೆಗೆ ದಿಗಿಲಾಯಿತು. ಇದ್ದಕ್ಕಿದ್ದಂತೆ ವಾದ್ಯಗಳ ಘೋಷಣೆ ನಿಂತು, ನಿರ್ಜನತೆಯ ನೀರವತೆಯಂತೆ ಆದುದನ್ನು ಕಂಡು, ದೊರೆಗೆ ಜೀವಭೀತಿಯುಂಟಾಯಿತು. ಹೆದರಿದ ಕಣ್ಣುಗಳಿಂದ ಜೀವಕನತ್ತ ತಿರುಗಿದನು.

ಜೀವಕ ಹೇಳಿದನು: "ಹೆದರಲು ಕಾರಣವಿಲ್ಲ, ಓ ದೊರೆಯೆ. ಭಗವಂತನ ವಿಹಾರಕ್ಕೆ ಕಣ್ಣಳತೆಯ ದೂರದಲ್ಲಿ ಬಂದೆವೆಂದು ಈ ಶಬ್ದ ವನ್ನು ನಿಲ್ಲಿಸಲಾಯಿತು. ಭಗವಂತನೂ ಆತನ ಭಿಕ್ಷುಸಂಘವೂ ಶಾಂತಿ ಯಲ್ಲಿ ಸದಾ ರಮಿಸತಕ್ಕವರು. ಆದಕ್ಕಾಗಿ ನೀರವತೆಯಿಂದ ನಾವು ನಡೆ ಯುವುದೇ ಸಾಧು. ಅದೋ ನೋಡು, ದೊರೆಯೆ: ನೆಲಕ್ಕೆ ಇಳಿದ ನಕ್ಷತ್ರಗಳಂತೆ ವಿಹಾರದ ದೀಪಗಳು ಮಿನುಗುತ್ತಿವೆ."

ವಿಹಾರಕ್ಕೆ ಬಂದಾಗ, ದೊರೆ ತನ್ನ ಆನೆಯ ರಥದಿಂದ ಕೆಳಗೆ ಇಳಿದನು. ಬುದ್ಧನ ವಾಸದಿಂದ ಪವಿತ್ರವಾಗಿದ್ದ ಆ ವನಭೂಮಿಯನ್ನು ದೊರೆಯ ಬರಿಕಾಲು ಸೋಂಕಿದ ಕೂಡಲೇ, ದೊರೆಯ ಚೇತನದ ತಾಪ ತವಿಸಿಹೋಯಿತು. ಅನಿರ್ವಚನೀಯವಾದ ತಂಪು ಅನುಭವವಾಯಿತು. ಆದರೂ, ತನ್ನ ಭೀತಿಯನ್ನು ಹೊರಗೆ ತೋರ್ಪಡಿಸಿಕೊಳ್ಳದೆ, ಜೀವಕನ

ಆಮ್ರವನವನ್ನೂ ಅದರ ಮಧ್ಯೆ ಅವನು ಕಟ್ಟಿಸಿಕೊಟ್ಟಿದ್ದ ವಿಹಾರವನ್ನೂ ಮೆಚ್ಚಿಕೊಳ್ಳುತ್ತ ಮುಂದೆ ನಡೆದನು.

ದೊರೆ ಬುದ್ಧನನ್ನು ಒಮ್ಮೆ ಚಿಕ್ಕಂದಿನಲ್ಲಿ ನೋಡಿದ್ದನು. ಅಲ್ಲದೆ ಆ ಸಭೆಯಲ್ಲಿ ಬುದ್ಧನಾರು ಎಂಬುದು ಆತನ ತೇಜಸ್ಸಿನಿಂದಲೇ ಸ್ವಯಂ ವ್ಯಕ್ತವಾಗಿತ್ತು. ಆದರೂ, 'ಈ ಮಹಾಸಂಘದಲ್ಲಿ ಭಗವಂತನು ಯಾರು?' ಎಂದು ಉಪಚಾರಕ್ಕಾಗಿ ಜೀವಕನನ್ನು ಪ್ರಶ್ನಿಸಿದನು.

ಜೀವಕನಿಗೆನ್ನಿಸಿತು: "ಭೂಮಿ ಎಲ್ಲಿ ಇದೆ ಎಂದು ಕೇಳುವುದೂ ಒಂದೇ, ಸೂರ್ಯಚಂದ್ರರನ್ನು ಯಾವ ಲಕ್ಷಣಗಳಿಂದ ಗುರುತಿಸಬಹುದು ಎಂದು ಕೇಳುವುದೂ ಒಂದೇ, ಮಹಾಮೇರುವಿನ ಮುಂದೆ ನಿಂತ ಮನುಷ್ಯ 'ಎಲ್ಲಿ ಆ ಮಹಾಮೇರು?' ಎಂದು ಪ್ರಶ್ನಿಸುವುದೂ ಒಂದೇ, ಈಗ ಈ ದೊರೆ 'ಈ ಮಹಾಸಂಘದಲ್ಲಿ ಭಗವಂತನು ಯಾರು?' ಎನ್ನುತ್ತಿರುವುದೂ ಒಂದೇ!"

ದೊರೆಯ ಪ್ರಶ್ನೆಗೆ ಉತ್ತರವಾಗಿ, ಜೀವಕನು ಭಗವಂತನಿಗೆ ಅಭಿಮುಖನಾಗಿ ಕೈಗಳನ್ನು ಜೋಡಿಸಿ ತಲೆಯ ಮೇಲಿಟ್ಟುಕೊಂಡು, "ಹೇ ರಾಜನ್, ಈತನೇ ಸರ್ವಜ್ಞನಾದ ಬುದ್ಧ ಭಗವಂತನು!" ಎಂದು ಪುಳಕಿತಶರೀರನಾಗಿ ಬಿನ್ನವಿಸಿದನು.

ವಿಹಾರದ ಕೊನೆಯಲ್ಲಿ, ಪೂರ್ವದ ಕಡೆ, ಮಧ್ಯದ ಕಂಬದ ಮುಂದೆ ಮಂಡಿಸಿದ್ದ ಭಗವಂತನನ್ನು ಅಜಾತಶತ್ರು ಕಂಡನು.

ದೊರೆ ಆ ಧರ್ಮಸಭೆಯನ್ನು ಪ್ರವೇಶಿಸಿದರೂ, ಅಲ್ಲಿ ಕುಳಿತಿದ್ದವರಲ್ಲಿ ಯಾರೂ ತಮ್ಮ ದೃಷ್ಟಿಯನ್ನು ಬಂದವನ ಕಡೆಗೆ ಕದಲಿಸಲಿಲ್ಲ. ಗಾಳಿಯ ಚಲನೆಯಿಲ್ಲದ ದಿವಸ, ಪ್ರಶಾಂತವಾದ ಸರೋವರದ ಜಲದ ಮೇಲೆ ತಲೆಯೆತ್ತಿಕೊಂಡಿರುವ ತಾವರೆಯ ಪುಷ್ಪಗಳಂತೆ ಆ ಅಲ್ಲಿಯ ಭಿಕ್ಷುಸಂಘ ನಿಶ್ಚಲವಾಗಿ ಇದ್ದಿತು.

ಆ ನೀರವತೆ, ಆ ನಿಶ್ಶಬ್ದತೆ, ಆ ನಿಶ್ಚಲತೆಯನ್ನು ಕಂಡು ದೊರೆ ಹೊಸ ಅನುಭವವನ್ನು ಹೊಂದಿದನು.

"ಅಯ್ಯೋ! ಇಂಥ ಶಾಂತಿ, ಇಂಥ ಉಪಶಾಂತಿ ನನ್ನ ಪಾಲಿಗಂತೂ ನಾನು ಪಡೆದುಕೊಂಡು ಬರಲಿಲ್ಲ. ನನ್ನ ಮಗನಾದ ಉದಾಯಿ

ಭದ್ರನಿಗಾದರೂ ಇಂಥ ಶಾಂತಿ, ಇಂಥ ಉಪಶಾಂತಿ ದೊರಕಿಕೊಳ್ಳಲಿ!" ಎಂದು ದೊರೆ ಹೃತ್ಪೂರ್ವಕವಾಗಿ ಹಾರೈಸಿದನು.

ದೊರೆ ತನ್ನ ಹಂಬಲವನ್ನು ಬಾಯಿಬಿಟ್ಟು ಹೇಳದಿದ್ದರೂ, ಸರ್ವಜ್ಞನಾದ ಬುದ್ಧನಿಗೆ ಅದು ಗೋಚರವಾಯಿತು. ಆಗ ಭಗವಂತನು ತಥಾಸ್ತು. ತಿಟ್ಟಿನಲ್ಲಿ ಹುಟ್ಟಿದ ಹೊಳೆಯು ತಗ್ಗಿನ ಕಡೆಗೆ ಪ್ರವಹಿಸು ವಂತೆ, ನನ್ನನ್ನು ಕಂಡ ಮೇಲೆ ನಿನ್ನ ಮನಸ್ಸು ಮಗನ ಕಡೆಗೆ ಹರಿಯಿ ತಲ್ಲವೆ!" ಎಂದನು.

ಭಗವಂತನ ಸರ್ವಜ್ಞತೆಯನ್ನು ಸಾಕ್ಷಾತ್ತಾಗಿ ಕಂಡು ಅಜಾತಶತ್ರು ಎಂದುಕೊಂಡ: "ಇಂತಹ ಭಗವಂತನ ಬಗೆಗೆ ನಾನು ಮಾಡಿರುವಷ್ಟು ದ್ರೋಹವನ್ನು ಬೇರೆ ಯಾರೂ ಮಾಡಿಲ್ಲ. ಭಗವಂತನಿಗೆ ಮಿತ್ರನಂತಿದ್ದ ನನ್ನ ತಂದೆಯನ್ನು ನಾನೇ ಕೊಂದೆ. ಭಗವಂತನಲ್ಲಿ ಪರಮದ್ವೇಷವನ್ನು ಬೆಳೆಸುತ್ತಿದ್ದ ದೇವದತ್ತನಿಗೆ ನಾನು ಸಂಗಾತಿಯಾಗಿ, ಅವನಿಗೆ ಸಹಾಯ ಮಾಡಿದೆ. ಇಷ್ಟೆಲ್ಲಾ ಅನ್ಯಾಯಗಳನ್ನು ನಾನು ಮಾಡಿದವನಾದರೂ, ಭಗವಂತನು ನನ್ನನ್ನು ಎಷ್ಟು ಕರುಣೆಯಿಂದ ಮಾತನಾಡಿಸುತ್ತಾನೆ!"

ಅಜಾತಶತ್ರು ಆ ಹೊತ್ತೇ ಬುದ್ಧನಿಗೆ ತನ್ನನ್ನು ತಾನು ಒಪ್ಪಿಸಿ ಕೊಂಡು, ಬಂದು ಭಗವಂತನ ಪಾದಗಳಿಗೆ ಎರಗಿದನು.

ಭಗವಂತನು ಅವನನ್ನು ಬಳಿಯಲ್ಲಿ ಕುಳ್ಳಿರಹೇಳಿ, "ದೊರೆಯೆ, ನಿನ್ನ ಮನಸ್ಸಿನಲ್ಲಿ ಏನಾದರೂ ಸಂದೇಹಗಳಿರುವುದಾದರೆ, ಕೇಳು. ಏನೂ ಸಂಕೋಚ ಬೇಡ." ಎಂದನು.

ಅಜಾತಶತ್ರು ಕೇಳಿದನು: "ಭಗವನ್! ಕ್ಷತ್ರಿಯರು ಆನೆಗಳನ್ನು ಏರುತ್ತಾರೆ, ಕುದುರೆಗಳನ್ನು ಹತ್ತುತ್ತಾರೆ; ಹಣ ಸಂಪಾದನೆ ಮಾಡು ತ್ತಾರೆ, ಹೆಂಡಿರು ಮಕ್ಕಳನ್ನು ಪೋಷಿಸುತ್ತಾರೆ; ದಾನ ಧರ್ಮ ನಡೆಸು ತ್ತಾರೆ, ಪುಣ್ಯ ಸಂಪಾದನೆ ಮಾಡುತ್ತಾರೆ; ಹೀಗೆ ಅವರು ಈ ಲೋಕ ದಲ್ಲಿ ಸಾರ್ಥಕವಾಗಿ ಬದುಕುತ್ತಾರೆ. ಆದರೆ ಭಿಕ್ಷುಗಳಿಗಾದರೋ ಹೆಂಡಿ ರಿಲ್ಲ ಮಕ್ಕಳಿಲ್ಲ; ಭಿಕ್ಷಾಪಾತ್ರೆಯನ್ನು ಹಿಡಿದು, ಮನೆಯಿಂದ ಮನೆಗೆ ಅಲೆದು, ಕಷ್ಟ ಕಾರ್ಪಣ್ಯ ಅನುಭವಿಸುತ್ತಾರೆ. ಇದರಿಂದ ಅವರಿಗೇನೋ ಪುಣ್ಯ ಸಂಪಾದನೆಯಾಗಿ ಅವರು ಪರದಲ್ಲಿ ಕೃತಾರ್ಥರಾಗಬಹುದಾದರೂ

ಅವರು ಶ್ರಮಣರಾದುದಕ್ಕೆ ಈ ಲೋಕದಲ್ಲಿ ಅವರಿಗೆ ಏನು ಲಾಭ ಬಂದ ಹಾಗಾಯಿತು?"

ಅಜಾತಶತ್ರು ಈ ಪ್ರಶ್ನೆಯನ್ನು ಕೇಳಿದಾಗ, ಆ ಸಭೆಯಲ್ಲಿ ಬುದ್ಧನ ಭಕ್ತರು ಮಾತ್ರವೇ ಅಲ್ಲದೆ, ಆ ಕಾಲದ ಇತರ ಗುರುಗಳ ಅನುಯಾಯಿಗಳೂ ಇದ್ದರು. ಆದ್ದರಿಂದ ಭಗವಂತನು ದೊರೆ ಕೇಳಿದ ಪ್ರಶ್ನೆಗೆ ತಾನು ಕೂಡಲೆ ಉತ್ತರ ಹೇಳದೆ, ಅವನ ಪ್ರಶ್ನೆಗೆ ಪ್ರತಿಯಾಗಿ ತಾನೊಂದು ಪ್ರಶ್ನೆ ಕೇಳಿದನು.

"ದೊರೆಯೆ! ಇದೇ ಪ್ರಶ್ನೆಯನ್ನು ನೀನು ಇತರ ಗುರುಗಳಲ್ಲಿ ಕೇಳಿದ್ದುಂಟೋ? ಹಾಗೆ ನೀನು ಕೇಳಿದಾಗ, ಅವರು ಏನಾದರೂ ನಿನಗೆ ಉತ್ತರ ಕೊಟ್ಟದ್ದುಂಟೊ?"

ದೊರೆ ಹೇಳಿದ: "ಹೌದು, ಕೇಳಿದೆ, ಭಗವನ್. ಅದಕ್ಕೆ ಅವರಲ್ಲಿ ಒಬ್ಬಾತ 'ನೀನು ಪುಣ್ಯಮಾಡು, ಅಥವಾ ಪಾಪ ಮಾಡು; ಅದರ ಫಲವನ್ನು ಅನುಭವಿಸುವುದಕ್ಕೆ ಪರಲೋಕವೆಂಬುದೇ ಇಲ್ಲ' ಎಂದ. ಮಾವಿನ ಹಣ್ಣು ಯಾವ ತೋಟದಲ್ಲಿ ಸಿಕ್ಕುತ್ತದೆ ಎಂದು ಪ್ರಶ್ನಿಸಿದರೆ, ನಮ್ಮ ತೋಟದಲ್ಲಿ ಹುಣಿಸೆ ಹಣ್ಣು ಸಿಕ್ಕುತ್ತದೆ ಎಂದಹಾಗೆ ಅವನು ಉತ್ತರ ಕೊಟ್ಟ. ನಾನು ಕೇಳಿದ ಪ್ರಶ್ನೆಯೇ ಒಂದು, ಅವನು ಹೇಳಿದ ಉತ್ತರವೇ ಒಂದು. ಹಾಗಾಗಿ, ಆ ಗುರುಗಳ ಹತ್ತಿರ ಹೋಗಿಬಂದದ್ದು, ಮರಳನ್ನು ಹಿಂಡಿ ಎಣ್ಣೆ ತೆಗೆಯುವ ಯತ್ನದಂತಾಯಿತು."

"ನಿನ್ನನ್ನು ಒಂದು ಪ್ರಶ್ನೆ ಕೇಳುತ್ತೇನೆ, ಮಹಾರಾಜ. ನಿನ್ನ ಅರಮನೆಯಲ್ಲಿ ಒಬ್ಬಾನೊಬ್ಬ ದಾಸನಿದ್ದಾನೆ, ಎಂದುಕೊ. ಅವನಿಗೆ ಪುಣ್ಯ ಗಳಿಸಬೇಕೆಂಬ ಬಯಕೆ ಬಂದಿತೆನ್ನು. ಅವನಿಗೆ ಒಮ್ಮೆ ಹೀಗೆನ್ನಿಸುತ್ತದೆ: 'ದೊರೆಯೂ ಮನುಷ್ಯ, ನಾನೂ ಮನುಷ್ಯ. ದೊರೆಗೋ ದೇವತೆಗಳ ಭೋಗವಿದೆ, ಇಲ್ಲಿ ನಾನೋ ದಾಸನಾಗಿ ದುಡಿಯುತ್ತಿದ್ದೇನೆ. ಅವನಾದರೋ ಇಷ್ಟಬಂದಷ್ಟು ದಾನಮಾಡಬಲ್ಲ, ನಾನು ಏನೇ ಮಾಡಿದರೂ ಅವನ ದಾನದಲ್ಲಿ ಸಾವಿರದ ಒಂದು ಪಾಲು ಕೂಡ ಆಗುವುದಿಲ್ಲ. ಆದ್ದರಿಂದ ನನಗೆ ಈ ಸಂಸಾರ ಸಾಕಾಗಿದೆ. ನಾನು ಹೋಗಿ ಎಲ್ಲಿಯಾದರೂ ಸಂನ್ಯಾಸಿಯಾಗಿಬಿಡುತ್ತೇನೆ.' ಎಂದುಕೊಳ್ಳುತ್ತಾನೆ. ಹಾಗೆ

ಹೋಗಿ ಸಂನ್ಯಾಸಿಯಾದವನನ್ನು ನೀನು ಮತ್ತೆ ದಾಸಕಾರ್ಯಕ್ಕೆ ಕರೆಯ ಬಲ್ಲೆಯಾ, ಮಹಾರಾಜ?"

"ಅದು ಹೇಗೆ ಆದೀತು? ಅವನು ಸಂಸಾರವನ್ನು ತೊರೆದು ಸಂನ್ಯಾಸಿ ಯಾದ ಮೇಲೆ, ಅವನಿಗೆ ನಾವು ಪೂಜೆಗೌರವಗಳನ್ನು ಸಲ್ಲಿಸಬೇಕು."

"ಈಗ ನಿನಗೆ ಗೋಚರವಾಯಿತೆ, ಮಹಾರಾಜ? ಸಂನ್ಯಾಸಿಯಾ ದವನಿಗೆ ಇಹದಲ್ಲಿಯೇ ಫಲ ದೊರಕುವುದೂ ಉಂಟು. ನಿನ್ನ ರಾಜ್ಯದಲ್ಲಿ ಎಷ್ಟೋ ಒಕ್ಕಲು ಕುಳಗಳುಂಟು. ಅವರಲ್ಲಿ ಯಾರಾದರೂ ತಮ್ಮ ನೇಗಿಲುಗಳನ್ನು ತೊರೆದು, ಹೋಗಿ ಕಾಷಾಯ ವಸ್ತ್ರಗಳನ್ನು ಸ್ವೀಕರಿಸಿ ಕೊಂಡರೆ, ಅವರನ್ನು ಬಲವಂತದಿಂದ ಮತ್ತೆ ಕೃಷಿಕರ್ಮಕ್ಕೆ ನಿಯೋಜಿಸ ಬಲ್ಲೆಯೇನು?"

"ಅದು ಹೇಗೆ ಆದೀತು? ಅದರ ಬದಲು ಅವರಿಗೆ ನಾವು ಪೂಜೆ ಗೌರವಗಳನ್ನು ಸಲ್ಲಿಸಬೇಕು."

"ಹೀಗೆ, ಮಹಾರಾಜ, ಸಂನ್ಯಾಸಿಯಾದವನಿಗೂ ಇಹದಲ್ಲಿಯೇ ಇಂಥ ಫಲಗಳು ಉಂಟು. ಆದರೆ ಇವೆಲ್ಲ ಸಣ್ಣ ಫಲಗಳು. ಇವಕ್ಕಿಂತ ದೊಡ್ಡ ಫಲ ಬೇರೆ ಉಂಟು. ಏನೆಂದರೆ: ಅದು ಅರ್ಹತ್ ಪದವಿಯೆಂಬ ಫಲ, ಅನಿರ್ವಚನೀಯವಾದ ಶಾಂತಿಯೆಂಬುದು ಆ ಫಲ. ಇದಕ್ಕಿಂತ ದೊಡ್ಡ ಫಲ ಇಹದಲ್ಲಿಯೂ ಇಲ್ಲ, ಪರದಲ್ಲಿಯೂ ಇಲ್ಲ."

"ಭಗವನ್! ನಾನು ಇದೇ ಪ್ರಶ್ನೆಯನ್ನು ಇತರರಲ್ಲಿ ಕೇಳಿದ್ದೇನೆ. ಅವರು ಕೊಟ್ಟ ಉತ್ತರವು ಅಸ್ಪಷ್ಟವಾಗಿದ್ದುದರ ಸುತ್ತ ಇನ್ನೊಂದು ಆವರಣವನ್ನು ಹಾಕಿದಂತಾಯಿತೇ ಹೊರತು, ನನಗೆ ಜ್ಞಾನೋದಯ ವಾಗಲಿಲ್ಲ. ಆದರೆ, ಈಗ, ಒಂದು ಸಾವಿರ ದೀಪ ಹಚ್ಚಿರಿಸಿದಂತೆ ಆಯಿತು. ಭಗವನ್! ಇದುವರೆಗೂ ನಿಮ್ಮ ಗುಣವನ್ನು ಕಾಣದಿದ್ದುದು ನನ್ನ ನಷ್ಟ. ಇದುವರೆಗೆ ನಾನು ಬದ್ಧನಾಗಿದ್ದೆ. ಈಗ ಮುಕ್ತನಾದೆ. ಇನ್ನು ಯಾರು ಏನು ಹೇಳಿದರೂ, ನಾನು ಧರ್ಮದಿಂದ ದೂರನಾಗ ತಕ್ಕವನಲ್ಲ. ಭಗವನ್, ಇಂದಿನಿಂದ ನಾನು ಬುದ್ಧನಿಗೂ ಧರ್ಮಕ್ಕೂ ಸಂಘಕ್ಕೂ ಶರಣು ಬಂದಿದ್ದೇನೆ. ಭಗವಂತನು ನನ್ನನ್ನು ಭಕ್ತಿಯುಳ್ಳ ಉಪಾಸಕನೆಂದು ಸ್ವೀಕರಿಸಬೇಕು."

ಅಜಾತಶತ್ರು ಹೀಗೆಂದು ಬೇಡಿಕೊಂಡು, ತಾನು ಅರಿಯದೆ ಮಾಡಿದ ಪಿತೃಹತ್ಯೆಗೆ ಬುದ್ಧನ ಹತ್ತಿರ ಕ್ಷಮೆ ಬೇಡಿದನು.

ಭಗವಂತನು ಅವನಿಗೆ ಅಭಯವನ್ನು ನುಡಿದನು: "ಮಹಾರಾಜ, ಯಾವನಾದರೂ ಹಿಂದೆ ಪ್ರಮಾದದಿಂದ ತಪ್ಪುಮಾಡಿದವನು, ಅನಂತರ ಅಪ್ರಮತ್ತನಾಗಿ ಮತ್ತೊಮ್ಮೆ ತಪ್ಪು ಮಾಡದಿದ್ದರೆ, ಅವನು ಮೋಡದ ಮರೆಯಿಂದ ಮುಕ್ತವಾದ ಚಂದ್ರಬಿಂಬದಂತೆ ಈ ಲೋಕದಲ್ಲಿ ಬೆಳಗುವನು. ಮಹಾರಾಜ, ಯಾವನಾದರೂ ಹಿಂದೆ ಪಾಪ ಕರ್ಮವನ್ನು ಮಾಡಿ, ಅನಂತರ ತಾನು ಮಾಡುವ ಕುಶಲ ಕರ್ಮಗಳಿಂದ ಅದನ್ನು ಮುಚ್ಚಿದರೆ, ಅಂಥವನು ಮೋಡಗಳ ಮರೆಯೆಂಬುದು ಕರಗಿ ಹೋದ ಚಂದ್ರನಂತೆ ಲೋಕದಲ್ಲಿ ಬೆಳಗುವನು."

ಅಜಾತಶತ್ರು ಸಮಾಧಾನಚಿತ್ತದಿಂದ ಬುದ್ಧನಿಗೆ ಪ್ರದಕ್ಷಿಣೆ ಮಾಡಿ, ನಮಸ್ಕರಿಸಿ, ತೆರಳಿದನು.

ಅಜಾತಶತ್ರು ವಿಹಾರವನ್ನು ಬಿಟ್ಟು ಹೋದ ಮೇಲೆ ಭಗವಂತನು ಹೇಳಿದನು: "ತಂದೆಯನ್ನು ಕೊಲ್ಲದೆ ಇದ್ದಿದ್ದರೆ, ಅಜಾತಶತ್ರು ಈ ದಿವಸ ಧರ್ಮಕಥೆಯ ಶ್ರವಣದಿಂದ ಸ್ರೋತಾಪತ್ತಿ ಫಲವನ್ನು ಪಡೆಯ ಬೇಕಾಗಿತ್ತು. ಆದರೆ, ಈಗಲಾದರೂ ಎಚ್ಚತ್ತು, ಅವನು ರತ್ನತ್ರಯ ಗಳಿಗೆ ಶರಣು ಬಂದದ್ದರಿಂದ, ಮುಂದೆ ಅವನಿಗೆ ಒದಗಬೇಕಾಗಿದ್ದ ಅವೀಚೀ ನರಕ ಸದ್ಯಕ್ಕೆ ತಪ್ಪಿತು. ಆದರೂ, ಮಾಡಿದ ಪಾಪದ ಫಲ ವನ್ನು ಅನುಭವಿಸಿಯೇ ತೀರಬೇಕು. ಆದರಂತೆ ಲೋಹಕುಂಭಲೋಕ ದಲ್ಲಿ ಆ ಪಾಪದ ಫಲ ಮುಗಿಯುವವರೆಗೂ ಇದ್ದು, ಅನಂತರ ದೇವ ಲೋಕದಲ್ಲಿ ವಿಜಿತವಿಶೇಷನೆಂಬ ದೇವತೆಯಾಗಿ ಜನ್ಮ ತಾಳುತ್ತಾನೆ."

— ✱ —

"ಅದು ಸರಿ. ತಪ್ಪು ಮಾಡಿದವನು ಇವನೇನೋ ಪಶ್ಚಾತ್ತಾಪ ಪಟ್ಟು, ಸಕಾಲದಲ್ಲಿ ಎಚ್ಚತ್ತು, ಸದ್ಧರ್ಮಕ್ಕೆ ಶರಣಾಗಿ, ಉದ್ಧಾರವಾದ. ಆದರೆ, ಇವನಿಗೆ ದುಷ್ಟಪ್ರೇರಣೆ ಮಾಡಿದ ಆ ಅವನು, ದೇವದತ್ತ, ಅವನ ಗತಿ ಏನಾಯಿತು?"

"ಅವನ ಗತಿಯೆ? ಇಂಥವರಿಗೆಲ್ಲಾ ಆಗುವುದು ಏನೋ, ಅದೇ!"

ಅಜಾತಶತ್ರು ಬುದ್ಧನನ್ನು ಕಾಣುವುದಕ್ಕೆ ಮೊದಲು ದೇವದತ್ತನಿಗೆ ಎಷ್ಟು ಅನುಕೂಲಗಳನ್ನು ಒದಗಿಸಿಕೊಟ್ಟನೋ, ಈಗ ಬುದ್ಧನನ್ನು ಕಂಡಮೇಲೆ ಅಷ್ಟೂ ಅಷ್ಟು ಅವನನ್ನು ಕೈಬಿಟ್ಟ. ಅವನ ವಿಹಾರಕ್ಕೆ ಕಳಿಸುತ್ತಿದ್ದ ಅನ್ನಾಹಾರಗಳನ್ನು ನಿಲ್ಲಿಸಿಬಿಟ್ಟ. ಅನ್ನಾಹಾರಗಳು ಯಾವಾಗ ನಿಂತುಹೋದುವೋ ದೇವದತ್ತನ ಸುತ್ತ ಬಂದು ಸೇರಿ ಕೊಂಡಿದ್ದ ಐನೂರು ಭಿಕ್ಷುಗಳೂ ಅವನನ್ನು ತೊರೆದು ಹೊರಟು ಹೋದರು. ದೇವದತ್ತ ರಾಜಗೃಹದಲ್ಲಿ ಭಿಕ್ಷೆಗೆಂದು ಹೊರಟರೆ, ಊರಿನ ಜನ ಅವನಿಗೆ ಭಿಕ್ಷೆಯಿಡಲಿಲ್ಲ ಎಂಬುದು ಹಾಗಿರಲಿ; ಅವನು ಬಂತೆಂದರೆ, ಅವನನ್ನು ಅಟ್ಟಿಸಿಕೊಂಡು ಹೋಗಿ, ಅವನ ಭಿಕ್ಷಾಪಾತ್ರೆಯನ್ನು ಒಡೆದು ಚೂರುಚೂರು ಮಾಡಿದರು. ದೇವದತ್ತನಿಗೆ ಇಷ್ಟಾದರೂ ಬುದ್ಧಿ ಬರಲಿಲ್ಲ. ಅದರ ಬದಲು. ಬುದ್ಧನ ಮೇಲೆ ಅವನ ದ್ವೇಷ ಇನ್ನೂ ಅಧಿಕವಾಯಿತು.

ಇವನಂತೆಯೇ ಬುದ್ಧಿ ಕೆಟ್ಟವರು ಇನ್ನೊಂದು ನಾಲ್ಕು ಜನ ಭಿಕ್ಷು ಗಳಾಗಿದ್ದರು. ಕೋಕಾಲಿಕ, ಕತಮೋರ ತಿಷ್ಯ, ಖಂಡದೇವಪುತ್ರ ಮತ್ತು ಸಮುದ್ರದತ್ತ ಎಂಬವರನ್ನು ಜೊತೆಗೆ ಸೇರಿಸಿಕೊಂಡು ಬುದ್ಧನ ಬಳಿಗೆ ಬಂದನು.

"ಭಗವಂತನಿಂದ ನನಗೆ ಅನ್ಯಾಯವಾಗಿದೆ. ನಾನೂ ಭಗವಂತನೂ ರಕ್ತಬಂಧುಗಳು. ಸಂಘದಲ್ಲಿ ನನಗೆ ಬರಬೇಕಾದ ಸ್ಥಾನವನ್ನು ನನಗೆ ನಿರಾಕರಿಸಲಾಗಿದೆ. ಅದು ಹೋಗಲಿ. ಈಗ, ಬೇರೆ ಐದು ವಿಷಯ ಗಳನ್ನು ಬೇಡಲು ಬಂದಿದ್ದೇವೆ." ಎಂದನು.

ಸರ್ವಜ್ಞನಾದ ಭಗವಂತನಿಗೆ ದೇವದತ್ತನ ಮನಸ್ಸಿನ ವ್ಯಾಪಾರ ಗಳೆಲ್ಲವೂ ಗೊತ್ತಿದ್ದರೂ, ಏನೂ ಗೊತ್ತಿಲ್ಲದಂತೆ, ಮಂದಹಾಸವನ್ನು ಸೂಸುತ್ತ, "ಏನದು? ಕೇಳು. ದೇವದತ್ತ." ಎಂದನು.

ದೇವದತ್ತ ಹೇಳಿದ: "ನಾವು ಸಂನ್ಯಾಸಿಗಳಾದವರು ಸುಖಪುರುಷ ರಂತೆ ಇಲ್ಲಿ ವಿಹಾರಗಳಲ್ಲಿ ವಾಸಮಾಡುವುದು ಬಿಟ್ಟು, ವನಪ್ರಾಂತ ಗಳಲ್ಲಿಯೇ ವಾಸಮಾಡುವಂತೆ ನಮಗೆ ಆಜ್ಞೆಯಾಗಬೇಕು."

ಭಗವಂತನು ಹೇಳಿದನು: "ಹಿಂದಿನ ಬುದ್ಧರುಗಳು ಯಾರೂ ಇಂತಹ ನಿಯಮವನ್ನು ಸರ್ವರಿಗೂ ಶಾಸನಮಾಡಲಿಲ್ಲ. ಈಗಲೂ ಬೇಕಾದವರು ವಿಹಾರಗಳಲ್ಲಿ ನಿಲ್ಲದೆ, ವನಾಂತರಗಳಲ್ಲೇ ವಾಸಿಸಬಹುದು. ನೀನು ಕೇಳುವ ನಿಯಮವನ್ನು ಎಲ್ಲರೂ ಪಾಲಿಸಬೇಕೆಂದು ನಿರ್ಬಂಧ ಪಡಿಸಿದರೆ, ಧರ್ಮದ ಕಲ್ಪವೃಕ್ಷದ ಮೂಲಕ್ಕೆ ಕೊಡಲಿಯನ್ನು ಬೀಸಿ ದಂತಾಗುತ್ತದೆ. ಅಲ್ಲದೆ, ಈ ಧರ್ಮವನ್ನು ಶರಣಾಗಿ ಬಯಸಿ ಬರುವ ಈ ಸಂಘದಲ್ಲಿ ಹಿಂದೆ ಭೋಗಭಾಗ್ಯಗಳನ್ನು ಅನುಭವಿಸಿದ ರಾಜರೂ ಬ್ರಾಹ್ಮಣರೂ ಶ್ರೇಷ್ಠಿಗಳೂ ಇರುತ್ತಾರೆ. ಮಕ್ಕಳು ಇದ್ದಾರೆ, ಮುದುಕರು ಇದ್ದಾರೆ, ಹೆಂಗಸರು ಇದ್ದಾರೆ. ಇವರನ್ನೆಲ್ಲಾ ವನಾಂತರದಲ್ಲೇ ವಾಸ ಮಾಡಬೇಕೆಂದು ಒತ್ತಾಯಮಾಡುವುದು ಯುಕ್ತವಲ್ಲ. ಆ ವಾಸ ಅವರಿಗೆ ಕ್ಷೇಮವಲ್ಲ. ಯಾವುದರಲ್ಲೂ ಅತಿ ಸಲ್ಲದು, ಮಧ್ಯಮ ಮಾರ್ಗವು ಸಾಧುವೆಂದು ನಮ್ಮ ಮತ. ಗದ್ದೆಯ ಕಡೆಗೆ ಹರಿದು ಬಂದು, ಅಲ್ಲಿನ ಬೆಳೆಗಳಿಗೆ ಜೀವ ಕೊಡುವಂಥ ನೀರಿನ ಕಾಲುವೆಗೆ ಕಟ್ಟೆ ಕಟ್ಟಿ ತಡೆಯು ವುದು ತರವೆ? ಆದರಂತೆ ಶೀಲೋಪವಾಸಗಳನ್ನು ನಿಷ್ಠೆಯಿಂದ ನಡಸಿ, ಧ್ಯಾನವನ್ನು ಅಭ್ಯಾಸಮಾಡಲು ಬಯಸಿ ಸಂಘಕ್ಕೆ ಬಂದವರು ಅರಣ್ಯ ದಲ್ಲಿ ವಾಸಿಸಿದರೂ ಒಂದೇ, ವಿಹಾರದಲ್ಲಿ ವಾಸಿಸಿದರೂ ಒಂದೇ. ಮತ್ತೆ, ನಿನ್ನ ಎರಡನೆಯ ಕೋರಿಕೆ ಯಾವುದು?"

"ಭಿಕ್ಷುಗಳು ಭಿಕ್ಷಾಪಾತ್ರೆಯನ್ನು ಹಿಡಿದು ಹೊರಟಾಗ, ಭಕ್ತರು ಏನು ಭಿಕ್ಷೆ ಹಾಕುವರೋ ಅದನ್ನು ಮಾತ್ರ ತಿನ್ನಬೇಕಲ್ಲದೆ, ಭಕ್ತರು ವಿಹಾರಕ್ಕೆ ಏನಾದರೂ ತಂದು ನೀಡಿದರೆ ಅದನ್ನು ಸ್ವೀಕರಿಸತಕ್ಕದ್ದಲ್ಲ ಎಂದು ಶಾಸನ ಮಾಡಬೇಕು."

"ಅದು ಆಗುವಂತಿಲ್ಲ. ಹಾಗೆ ಮಾಡಿದರೆ, ಮಕ್ಕಳೂ ಮುದುಕರೂ ಕಾಯಿಲೆಯವರೂ ಆದ ಭಿಕ್ಷುಭಿಕ್ಷುಣಿಯರು ಆಹಾರವನ್ನು ಪಡೆಯುವುದು ಹೇಗೆ? ಅದಾಗದು. ಮತ್ತೆ ಮೂರನೆಯದು?"

"ಭಿಕ್ಷುಗಳು ಅಲ್ಲಿ ಇಲ್ಲಿ ಬಿದ್ದ ಹರಕುವಸ್ತ್ರಗಳನ್ನು ತೆಗೆದು ಬಳಸಿ ಕೊಳ್ಳಬೇಕೇ ಹೊರತು, ಭಕ್ತಾದಿಗಳು ಕೊಟ್ಟ ಹೊಸಬಟ್ಟೆಗಳನ್ನು ಉಪ ಯೋಗಿಸಬಾರದೆಂದು ಶಾಸನಮಾಡಬೇಕು."

"ಅದು ಕೂಡ ಆಗದು. ಅಶುಚಿಯಾದ ವಸ್ತ್ರಗಳನ್ನು ಮೈಗೆ ಮುಟ್ಟಿಸುವುದು ಮನಸ್ಸಿಗೆ ಒಪ್ಪದ ವಿಷಯ. ಅಲ್ಲದೆ, ಭಿಕ್ಷುಗಳಿಗೆ ವಸ್ತ್ರ ದಾನ ಮಾಡಿದರೆ, ಭಕ್ತರಿಗೆ ಪುಣ್ಯ ಸಂಪಾದನೆಯಾಗುತ್ತದೆ. ಇದನ್ನು ತಪ್ಪಿಸುವುದು ಸರಿಯಲ್ಲ."

"ಹಾಗಾದರೆ, ಇಷ್ಟಾದರೂ ಮಾಡಬಹುದಲ್ಲ? ಭಿಕ್ಷುಗಳು ಮಳೆ ಗಾಲದಲ್ಲಿ ಯಾವ ರೀತಿಯ ಮನೆಯೊಳಗೂ ಆಶ್ರಯ ಪಡೆಯದೆ, ಮರದ ಬುಡದಲ್ಲಿ ವಾಸಿಸಬೇಕು."

"ಅದೂ ಆಗುವಂತಿಲ್ಲ. ಮಳೆಗಾಲದಲ್ಲಿ ಮರದ ಬುಡದಲ್ಲಿ ನೆಲೆಸಿ ಬದುಕುವ ದಾರ್ಢ್ಯವಿಲ್ಲದ ಭಿಕ್ಷುಗಳೂ ಭಿಕ್ಷುಣಿಯರೂ ಸಂಘದಲ್ಲಿ ಉಂಟು. ಅಲ್ಲದೆ, ಸಂಘಕ್ಕೆ ವಾಸಸ್ಥಾನವನ್ನು ಕಟ್ಟಿಸಿ ಕೊಡುವುದು ಕೂಡ ಪುಣ್ಯದ ಕೆಲಸ. ಅದನ್ನು ತಪ್ಪಿಸಬಾರದು. ಮತ್ತೆ, ನಿನ್ನ ಕೊನೆಯ ಕೋರಿಕೆ ಏನು?"

"ಇದು ನನ್ನ ಕೊನೆಯ ಕೋರಿಕೆ. ಯಾವ ಭಿಕ್ಷುವೂ ಮಾಂಸ ವನ್ನು ತಿನ್ನತಕ್ಕದ್ದಲ್ಲ, ಎಂದು ವಿಧಿಸಬೇಕು. ಇತರ ಕೆಲವು ಮತಗಳಲ್ಲಿ ಮಾಂಸವು ನಿಷಿದ್ಧ. ನಾವು ಮಾಂಸವನ್ನು ತಿನ್ನುವುದನ್ನು ಕಂಡು ಅವರು ನಗುತ್ತಾರೆ. ಆದ್ದರಿಂದ ನಾವೂ ಅವರಂತೆ ಮಾಂಸವನ್ನು ತ್ಯಜಿಸುವುದು ಮೇಲು."

ಅದಕ್ಕೆ ಭಗವಂತನು ಹೇಳಿದನು: "ನಾವು ಕುರುಡರ ಹಿಂದೆ ಕುರುಡರಂತೆ ಹೋಗಬೇಕಾದ್ದಿಲ್ಲ. ಶ್ರದ್ಧೆಯುಳ್ಳವರು ಮಾಂಸವನ್ನು ಅರ್ಪಿಸುತ್ತಾರೆ. ಔಷಧವನ್ನು ಒಪ್ಪಿಸುತ್ತಾರೆ, ಇತರ ಪದಾರ್ಥಗಳನ್ನು ನೀಡುತ್ತಾರೆ, ಪುಣ್ಯವನ್ನು ಸಂಪಾದಿಸುತ್ತಾರೆ. ಪ್ರಾಣಿಯನ್ನು ವಧೆ ಮಾಡುವುದು ಪಾಪವಲ್ಲದೆ, ಮಾಂಸ ತಿನ್ನುವುದು ಪಾಪವಲ್ಲ. ಯಾವ ಯಾವ ದೇಶದಲ್ಲಿ ಯಾವಯಾವ ಆಹಾರ ಪದ್ಧತಿಯೋ ಅದನ್ನು ತಿನ್ನು ವುದರಲ್ಲಿ ತಪ್ಪಿಲ್ಲ; ಬಾಯಿ ಚಪಲಕ್ಕಾಗಿ, ನಾಲಗೆಯ ರುಚಿಗಾಗಿ ಅದನ್ನು ಬಯಸಿ ತಿಂದರೆ, ಅದು ದೋಷ. ಮರದಡಿಯಲ್ಲಿದ್ದವರೂ ಅರ್ಹತರಾಗ ಬಹುದು, ಪರ್ಣಶಾಲೆಯಲ್ಲಿದ್ದವರೂ ಅರ್ಹತರಾಗಬಹುದು. ಹರಕು ವಸ್ತ್ರಗಳನ್ನು ಆಯ್ದು ಎತ್ತಿಕೊಂಡವರೂ ಅರ್ಹತರಾಗಬಹುದು, ಹೊಸ

ವಸ್ತ್ರಗಳನ್ನು ದಾನ ತೆಗೆದುಕೊಂಡವರೂ ಅರ್ಹತರಾಗಬಹುದು. ಮಾಂಸ ತಿನ್ನುವವರೂ ಅರ್ಹತರಾಗಬಹುದು, ಮಾಂಸ ತಿನ್ನದವರೂ ಅರ್ಹತರಾಗಬಹುದು. ಎಲ್ಲರಿಗೂ ಒಂದೇ ರೀತಿಯ ಆಚಾರವನ್ನು ಶಾಸನ ಮಾಡಿದರೆ, ಎಲ್ಲರಿಗೂ ಅದರಂತೆ ನಡೆಯಲು ಆಗದಿರಬಹುದು. ಆದ್ದರಿಂದ ಎರಡೂ ಅತಿಗಳನ್ನು ದೂರಮಾಡಿ, ಮಧ್ಯಮ ಮಾರ್ಗವನ್ನು ಹಿಡಿಯುವುದೇ ಶ್ರೇಯಸ್ಕರ. ಇದನ್ನು ಲೋಕಕ್ಕೆ ಒದುಕಿ ಬೋಧಿಸುವುದೇ ಬುದ್ಧರ ಕರ್ತವ್ಯ."

"ಹಾಗಾದರೆ, ಇಂಥ ಸಡಿಲವಾದ ಸಂಘಜೀವನ ನಮಗೆ ಒಗ್ಗುವುದಿಲ್ಲ. ನಾವು ಇನ್ನೂ ತೀವ್ರತರವಾದ ಕಠಿನ ವ್ರತಗಳನ್ನು ಆಚರಿಸುವವರು" ಎಂದುಕೊಂಡು, ದೇವದತ್ತನು ಅಲ್ಲಿಂದ ಎದ್ದು ಹೊರಟನು. ಕೋಕಾಲಿಕ ಮುಂತಾದ ನಾಲ್ವರೂ ಅವನ ಹಿಂದೆ ಹೊರಟರು. ಹೀಗೆ ದೇವದತ್ತನ ಹಿಂದೆಯೇ ಎದ್ದು ಹೋದವರು ಸುಮಾರು ಐನೂರು ಜನ ಆದರು. ದೇವದತ್ತ ಅವರನ್ನು ಕರೆದುಕೊಂಡು ಮತ್ತೆ ತನ್ನ ಗಯಾನದೀ ತೀರದ ವಿಹಾರಕ್ಕೇ ಹೋದ.

ಇತ್ತ, ಭಗವಂತನು "ಅನ್ಯಾಯವಾಗಿ ಈ ಐನೂರು ಜನರೂ ತಪ್ಪು ದಾರಿ ಹಿಡಿದು ಕೆಡುವರಲ್ಲ. ಇವರನ್ನು ಧರ್ಮದ ದಿಕ್ಕಿಗೆ ನಡಸಬೇಕು" ಎಂದುಕೊಂಡು, ಸಾರಿಪುತ್ರ ಮೌದ್ಗಲ್ಯಾಯನರನ್ನು ಕುರಿತು, "ನೀವು ಹೋಗಿ, ಆ ಬುದ್ಧಿಯಿಲ್ಲದ ಭಿಕ್ಷುಗಳಿಗೆ ಬುದ್ಧಿ ಹೇಳಿ, ಅವರನ್ನು ತಿದ್ದಿ ಕರೆದುತನ್ನಿರಿ." ಎಂದನು.

ಸಾರಿಪುತ್ರ ಮೌದ್ಗಲ್ಯಾಯನರು ದೇವದತ್ತನ ವಿಹಾರಕ್ಕೆ ಹೋಗುವ ವೇಳೆಗೆ, ಅಲ್ಲಿ ದೇವದತ್ತನು ಭಿಕ್ಷುಗಳ ಮಧ್ಯೆ ಕುಳಿತು, ಬುದ್ಧನನ್ನು ಅನುಕರಿಸುವಂತೆ ಧರ್ಮಕಥನ ನಡೆಸುತ್ತಿದ್ದ. ಸಾರಿಪುತ್ರ ಮೌದ್ಗಲ್ಯಾಯನರನ್ನು ಕಂಡಕೂಡಲೆ, ದುರ್ಮೋಧನಾದ ದೇವದತ್ತನು ಅವರು ಕೂಡ ಬುದ್ಧನ ಸಂಘವನ್ನು ತ್ಯಜಿಸಿ ತನ್ನ ಹಿಂದೆ ಬಂದರೆಂದೇ ಭ್ರಮಿಸಿದನು. ಅದೇ ಭ್ರಮೆಯಿಂದಲೇ ಅತ್ಯಾದರದಿಂದ ಅವನನ್ನು ಬರಮಾಡಿಕೊಂಡನು. ಅವರನ್ನು ಬುದ್ಧನು ಹೇಗೆ ತನ್ನ ಬಲಗಡೆಯಲ್ಲೂ

ಎಡಗಡೆಯಲ್ಲೂ ಕುಳ್ಳಿರಿಸಿಕೊಳ್ಳುತ್ತಿದ್ದನೋ ಹಾಗೆಯೇ ತಾನೂ ಅವರನ್ನು ತನ್ನ ಎಡಬಲಗಳಲ್ಲಿ ಕುಳ್ಳಿರಿಸಿಕೊಂಡನು.

ಸ್ವಲ್ಪ ಹೊತ್ತಾದ ಮೇಲೆ. ಪುನಃ ಬುದ್ಧನು ಮಾಡುತ್ತಿದ್ದುದನ್ನೇ ಅನುಕರಿಸಿ, "ಸಾರಿಪುತ್ರ, ನನಗೆ ಆಯಾಸವಾಗಿದೆ. ಈ ಭಿಕ್ಷು ಸಂಘಕ್ಕೆ ನೀನು ಧರ್ಮವನ್ನು ಉಪದೇಶಮಾಡು" ಎಂದನು.

ಬಳಿಯಲ್ಲಿಯೇ ನಿಂತಿದ್ದ ಕೋಕಾಲಿಕ, ಅವರನ್ನು ಸಂಘಕ್ಕೆ ಸೇರಿಸಬಾರದೆಂದು ಮೊದಲೇ ವಿರೋಧಿಸಿದ್ದವನು, ಸಂಘಕ್ಕೆ ಅವರು ಧರ್ಮೋಪದೇಶ ಮಾಡಕೂಡದೆಂದು ಪ್ರತಿಭಟಿಸಿದನು. ಆದರೆ ದೇವದತ್ತನು ಅವನ ಪ್ರತಿಭಟನೆಯನ್ನು ತಳ್ಳಿಹಾಕಿದನು.

ಸಾರಿಪುತ್ರನು ಧರ್ಮೋಪದೇಶನ ಮಾಡಿದನು. ಇನ್ನೊಬ್ಬ ಭಗವಂತ ಬುದ್ಧನೇ ಮಾತನಾಡುತ್ತಿರುವನೋ ಎಂಬಂತೆ ಅಮೃತದ ಮಳೆ ಕರೆದ ಹಾಗೆ ಮಾತನಾಡಿದನು. ಕೇಳಿದವರಿಗೆಲ್ಲ ಮನಸ್ಸು ಪರಿವರ್ತನೆಯಾಯಿತು. ತಾವು ಭಗವಂತನ ಭಿಕ್ಷುಸಂಘವನ್ನು ಬಿಟ್ಟು, ದೇವದತ್ತನ ಹಿಂದೆ ಬಂದದ್ದು ತಪ್ಪು ಎನ್ನಿಸಿತು. ಎಲ್ಲರೂ ತಮ್ಮ ಗೆಯ್ಮೆಗೆ ಪಶ್ಚಾತ್ತಾಪವನ್ನು ಸೂಚಿಸಿ, ಸಾರಿಪುತ್ರನನ್ನು ಹಿಂಬಾಲಿಸುವುದಕ್ಕೆ ಸಮ್ಮತಿಸಿದರು.

ಸಂಘದಲ್ಲಿ ಈ ಪರಿವರ್ತನೆಗಳು ಆಗುತ್ತಿರುವಾಗ ದೇವದತ್ತನು ಹಾಗೇ ಕಣ್ಣುಮುಚ್ಚಿ ತೂಕಡಿಸುತ್ತ ನಿದ್ರೆ ಹೋಗಿದ್ದನು. ಕೋಕಾಲಿಕನು ಎಚ್ಚರವಾಗಿದ್ದರೂ, ಅವನು ಮಂತ್ರಮುಗ್ಧನ ಹಾಗೆ ಸಾರಿಪುತ್ರನ ಮಾತುಗಳನ್ನು ಕೇಳುತ್ತಿದ್ದರೂ, ಕೋಪದ ಅತಿರೇಕದಿಂದ ಅವನಿಗೆ ಏನು ಮಾಡಲೂ ತೋಚಲಿಲ್ಲ.

ದೇವದತ್ತನಿಗೆ ಎಚ್ಚರವಾಗುವ ವೇಳೆಗೆ, ಅವನೊಬ್ಬ, ಜೊತೆಗೆ ಕೋಕಾಲಿಕ ಒಬ್ಬ ಹೊರತು ಮಿಕ್ಕವರೆಲ್ಲ ಹೊರಟುಹೋಗಿದ್ದರು. ಕೋಕಾಲಿಕನು ದೇವದತ್ತ ಎಚ್ಚರಗೊಂಡದ್ದನ್ನು ಕಂಡು, ತನ್ನ ಒಳಗೇ ಕುದಿಯುತ್ತಿದ್ದ ಕೋಪವನ್ನು ಬೇರೆ ಯಾರ ಮೇಲೂ ಕಾರಿಕೊಳ್ಳಲಾರದೆ, ದೇವದತ್ತನ ಮೇಲೆಯೇ ತಿರುಗಿಬಿದ್ದನು. ದೇವದತ್ತನ ಎದೆಯ ಮೇಲೆ ಒದ್ದನು. ದೇವದತ್ತ ರಕ್ತ ಕಾರಿಕೊಂಡು ಬಿದ್ದನು.

ದೇವದತ್ತನಿಗೆ ಆಗ ಜ್ಞಾನೋದಯವಾಯಿತು. ತಾನು ಭಗವಂತನ ವಿಷಯಕವಾಗಿ ಮಾಡಿದ ಅಪರಾಧಗಳನ್ನೆಲ್ಲ ನೆನೆದು ಪಶ್ಚಾತ್ತಾಪಪಟ್ಟನು. ಬುದ್ಧನ ಹತ್ತಿರ ಹೋಗಿ ಕ್ಷಮೆ ಬೇಡಬೇಕೆಂದು ಎದ್ದನು. ಅವನ ಸಂಗಡಿಗರು 'ಬೇಡ, ಬೇಡ' ಎಂದರು. ಆದರೂ ದೇವದತ್ತನು ಭಗವಂತನನ್ನು ಕಂಡೇ ತೀರಬೇಕೆಂದು ಕಾತರಿಸಿದನು. ಭಗವಂತನಿಗೆ ತಾನೇನು ಅಪರಾಧ ಮಾಡಿದ್ದರೂ, ತನ್ನ ಮೇಲೆ ಆತನಿಗೆ ದ್ವೇಷವಿಲ್ಲವೆಂದು ದೇವದತ್ತ ದೃಢವಾಗಿ ಬಲ್ಲ.

ದೇವದತ್ತನ ಕಾತರವನ್ನು ಭಗವಂತನಿಗೆ ತಿಳಿಸಿದರು. "ಈ ಜನದಲ್ಲಿ ಅವನು ನನ್ನನ್ನು ನೋಡುವುದು ಸಾಧ್ಯವಿಲ್ಲ. ಅವನು ಇದುವರೆಗೆ ಮಾಡಿರುವ ಅಧರ್ಮಕೃತ್ಯಗಳೇ ಅವನ ಕೋರಿಕೆ ಈಡೇರುವುದಕ್ಕೆ ಅಡ್ಡಿಯಾಗಿವೆ. ನಾನು ಮಾತ್ರವಲ್ಲ, ನನ್ನಂತಹ ಬುದ್ಧರು ನೂರು ಸಾವಿರಮಂದಿ ಆದರೂ ಅವನಿಗೆ ಏನೂ ಸಹಾಯಮಾಡಲಾರರು. ಅವರವರ ಉದ್ಧಾರವನ್ನು ಅವರವರು ಸಾಧಿಸಿಕೊಳ್ಳಬೇಕೇ ಹೊರತು, ಒಬ್ಬರು ಇನ್ನೊಬ್ಬರನ್ನು ಉದ್ಧರಿಸಲಾರರು." ಎಂದು ಭಗವಂತನು ಹೇಳಿಕಳುಹಿಸಿದನು.

ಆದರೂ, ದೇವದತ್ತನಿಗೆ ಬುದ್ಧನನ್ನು ಕಂಡಲ್ಲದೆ ಮನಸ್ಸು ನಿಲ್ಲದು. ಬಲವಂತದಿಂದ ಒಂದು ಶಿಬಿಕೆಯನ್ನು ಏರಿಕೊಂಡು, 'ಜೇತವನ ವಿಹಾರಕ್ಕೆ ನನ್ನನ್ನು ಒಯ್ಯಿರಿ' ಎಂದು ಕೇಳಿಕೊಂಡನು.

ಅವನು ಜೇತವನ ವಿಹಾರದ ಹತ್ತಿರ ಬಂದದ್ದನ್ನು ಬುದ್ಧನಿಗೆ ತಿಳಿಸಿದರು. ಭಗವಂತನು ಹೇಳಿದನು: "ಅವನು ಏನೇ ಮಾಡಿದರೂ, ನನ್ನನ್ನು ನೋಡುವಂತಿಲ್ಲ. ಅದು ಏಕೆ ಎಂಬುದು ಇಷ್ಟರಲ್ಲಿಯೇ ನಿಮಗೇ ಕಣ್ಣಿಗೆ ಗೊತ್ತಾಗುತ್ತದೆ."

ದೇವದತ್ತನನ್ನು ಶಿಬಿಕೆಯಲ್ಲಿ ಹೊತ್ತು ತಂದವರು, ಜೇತವನದ ಹೊರಗೆ ಅದನ್ನು ಇಳಿಸಿ, ಕಾಲು ತೊಳೆದುಕೊಂಡು ಬರೋಣವೆಂದು ಬಳಿಯ ಕೊಳಕ್ಕೆ ಹೋದರು. ಅವರು ಬರುವುದರೊಳಗೇ ದೇವದತ್ತನಿಗೆ ಆತುರ, ಭಗವಂತನನ್ನು ಆದಷ್ಟು ಬೇಗ ಕಾಣಬೇಕೆಂದು. ಏಳಲು ಕೈಲಾಗದಿದ್ದರೂ, ಅದೇನೋ ಪ್ರೇರಣೆಯಿಂದ ಥಿಗ್ಗನೆದ್ದು, ಜೇತವನದ ಕಡೆಗೆ ನುಗ್ಗಿದನು.

ಆದರೆ, ಅವನ ಕಾಲು ಅಲ್ಲಿಯ ನೆಲಕ್ಕೆ ತಾಗಿತೋ ಇಲ್ಲವೋ, ಭೂಮಿ ಬಿರಿದು, ಭೂಗರ್ಭದಿಂದ ಅಗ್ನಿಯ ಜ್ವಾಲೆ ಭುಗ್ಗನೆ ಮೇಲಕ್ಕೆ ನಾಲಗೆ ಚಾಚಿತು. ಅವೀಚೀ ನರಕದಿಂದ ಮೇಲೆದ್ದ ಆ ಬೆಂಕಿಯು ಮೊದಲು ಅವನ ಕಾಲುಗಳನ್ನು, ಅನಂತರ ಅವನ ದೇಹಮಧ್ಯವನ್ನು, ಕಡೆಗೆ ಅವನ ತಲೆಯ ತುದಿಯನ್ನು ಆವರಿಸಿಕೊಂಡು ನುಂಗಿತು.

ದೇವದತ್ತನು ಅದುವರೆಗೆ ಕಾಣದ ಭೀತಿಯನ್ನು ಆಗ ಕಂಡು, ಬೇರೆ ದಿಕ್ಕು ಕಾಣದೆ, ಅನನ್ಯಶರಣನಾಗಿ, "ಓ ಬುದ್ಧ! ಓ ಬುದ್ಧ! ನೀನಲ್ಲದೆ ನನಗೆ ಬೇರೆ ಗತಿ ಇಲ್ಲ! ತ್ರಾಹಿ! ತ್ರಾಹಿ!" ಎಂದು ಮೊರೆಯಿಟ್ಟನು. ಅದೇ ಹೊತ್ತಿನಲ್ಲಿ ಅವನ ಬಾಯಿಂದ ತಾನಾಗಿಯೇ ಬುದ್ಧನನ್ನು ಕುರಿತ ಸ್ತೋತ್ರವೊಂದು ನಡೆದುಬಂದಿತು.

ಹೀಗೆ ದೇವದತ್ತನು, ಮೊದಲು ಭಗವಂತನನ್ನು ಅಷ್ಟು ಅಸೂಯೆಯಿಂದ ದ್ವೇಷಿಸುತ್ತಿದ್ದವನು, ಕಡೆಗೆ ಬುದ್ಧನಿಗೂ ಧರ್ಮಕ್ಕೂ ಸಂಘಕ್ಕೂ ಸಾಯುವ ಹೊತ್ತಿನಲ್ಲಿ ಶರಣಾಗತಿಯನ್ನು ಬಿನ್ನವಿಸಿಕೊಂಡನು.

ಆ ವಾರ್ತೆಯನ್ನು ಭಗವಂತನಿಗೆ ತಿಳಿಸಿದರು. ಭಗವಂತನು ಹೇಳಿದನು: "ಹಿಂದೆ ಮಾಡಿದ ಪಾಪದ ಫಲವನ್ನು ಅವನು ಅವೀಚೀ ನರಕದಲ್ಲಿ ಅನುಭವಿಸುವನು. ಆದರೆ, ಈಗ ರತ್ನತ್ರಯಕ್ಕೆ ಶರಣಾದುದರಿಂದ, ಮುಂದೆ ಶಕ್ತೀಶ್ವರನೆಂಬ ದೇವತೆಯಾಗಿ ಜನ್ಮತಾಳುವನು."

# ಜೀವಕ

“ಆ್ಞ! ದೇವದತ್ತನ ಕತೆ ಮುಗಿದ ಹಾಗಾಯಿತು. ಮತ್ತೆ?”

“ಮತ್ತೆ? ಬೇರೇನು ಬೇಕು?”

“ಹೇಳು, ಬೇರೆ ಯಾರಾದರೂ ಬುದ್ಧನಿಗೆ ವಿಹಾರದಾನಮಾಡಿ ದವರ ಕಥೆಯನ್ನ.”

“ಹಾಗಾದರೆ, ಜೀವಕನದೇ ಹೇಳುತ್ತೇನೆ, ಕೇಳಿ. ಬುದ್ಧನಿಗೆ ವಿಹಾರವನ್ನು ದಾನ ಮಾಡಿದವನ ಕತೆಯೂ ಆಯಿತು, ಬಿಂಬಿಸಾರ ಅಜಾತಶತ್ರುಗಳಿಗೆ ಸಂಬಂಧಿಸಿದವನ ಕಥೆಯೂ ಆಯಿತು. ಕೇಳಿ.”

— ೧ —

ಬಿಂಬಿಸಾರನು ರಾಜಗೃಹದಲ್ಲಿ ಆಳುತ್ತಿದ್ದಾಗ, ವೈಶಾಲಿಯಲ್ಲಿ ಆಮ್ರಪಾಲಿ ಎಂಬವಳು ಒಬ್ಬಳು ನಾಗರಸ್ತ್ರೀ, ಎಂದರೆ ಗಣಿಕೆ. ಅವಳ ಸೌಂದರ್ಯವೇ ಮೊದಲಾದ ಅತಿಶಯಗಳಿಂದಾಗಿ ಆ ನಗರಕ್ಕೆ ತುಂಬ ಪ್ರಸಿದ್ಧಿ ಬಂದಿತ್ತು.

ತನ್ನ ಮಗಧದ ನೆರೆನಾಡಿನವರಾದ ಲಿಚ್ಛವಿಗಳಿಗೆ ಇಂತಹ ಹೆಸರು ವಾಸಿ ಬಂದಿತಲ್ಲಾ, ತನ್ನ ರಾಜಧಾನಿಯಲ್ಲಿ ಅವಳಂತಹ ನಗರಶೋಭಿನಿ ಯಿಲ್ಲವಲ್ಲಾ, ಎಂದು ಬಿಂಬಸಾರನು ಖಿನ್ನನಾದನು. ಆ ಕೊರತೆಯನ್ನು ನೀಗುವುದಕ್ಕಾಗಿ ಸುತ್ತುಮುತ್ತಿನ ಸುಂದರಸ್ತ್ರೀಯರನ್ನೆಲ್ಲಾ ಬರಮಾಡಿ, ಅವರಲ್ಲಿ ಪರಮಸುಂದರಿಯಾದವಳನ್ನು ನಾಗರಸ್ತ್ರೀಯಾಗಿ ವರಿಸಿ, ನೇಮಕ ಮಾಡಿದನು. ಹೀಗೆ ಆರಿಸಿಬಂದವಳ ಹೆಸರು ಶಾಲಾವತಿ.

ದೊರೆ ಅವಳಿಗೋಸ್ಕರವಾಗಿ ಎರಡು ಲಕ್ಷದ ಚಿನ್ನದ ಹಣಗಳನ್ನು ತೆರಿಗೆಯಾಗಿ ವಿಧಿಸಿದನು. ಆಮ್ರಪಾಲಿಗೆ ಸಮಾನಳಾದವಳು ತಮ್ಮ ನಗರ ದಲ್ಲೂ ಉಂಟಾದಳೆಂದು ಪ್ರಜೆಗಳು ಆ ತೆರಿಗೆಯನ್ನು ಸಂತೋಷದಿಂದ ಸಲ್ಲಿಸಿದರು. ದೊರೆ ಅದರ ಜೊತೆಗೆ ತಾನೂ ಒಂದು ಲಕ್ಷವನ್ನು ಸೇರಿಸಿ, ಅವಳಿಗೆ ಅನೇಕ ಉದ್ಯಾನವನಗಳನ್ನೂ, ಉಪ್ಪರಿಗೆ ಮನೆಗಳನ್ನೂ, ಅಪಾರವಾದ ವಸ್ತ್ರಾಭರಣಗಳನ್ನೂ ಕೊಟ್ಟನು. ಶಾಲಾವತಿಯೊಡನೆ

ಒಂದು ರಾತ್ರಿ ಕಳೆಯುವುದಕ್ಕೆ ಕೊಡಬೇಕಾದ ಶುಲ್ಕವನ್ನು ಎರಡು ಸಾವಿರ ಚಿನ್ನದ ನಾಣ್ಯಗಳೆಂದು ನಿಗದಿಮಾಡಿದನು. ಆಮ್ರಪಾಲಿಗೆಂದು ಲಿಚ್ಛವಿಗಳು ವಿಧಿಸಿದ್ದ ಶುಲ್ಕಕ್ಕೆ ಇದು ಎರಡರಷ್ಟು ಆಗಿತ್ತು. ಶಾಲಾವತಿಯಿಂದ ರಾಜಗೃಹದ ಹೆಸರು ಹತ್ತು ದಿಕ್ಕುಗಳಿಗೂ ಹರಡಿತು.

ಶಾಲಾವತಿಯ ಹತ್ತಿರ ಬಂದು ಹೋಗುತ್ತಿದ್ದವರಲ್ಲಿ ಬಿಂಬಿಸಾರನ ಮಗನಾದ ಅಭಯರಾಜಕುಮಾರನೂ ಒಬ್ಬ. ಅವನಿಂದ ಶಾಲಾವತಿ ಗರ್ಭವತಿ ಆದಳು. ಆದರೆ ತಾನು ಗರ್ಭಧರಿಸಿದ್ದನ್ನು ಅವಳು ಅಭಯನಿಗೆ ತಿಳಿಸಲಿಲ್ಲ.

ಆಗಿನ ಕಾಲದ ನಾಗರಸ್ತ್ರೀಯರಲ್ಲಿ ಅದೊಂದು ವಾಡಿಕೆ: ತಾವು ಬಸಿರಿಯರಾದುದನ್ನು ಬಯಲಿಗೆ ತಿಳಿಸುತ್ತಿರಲಿಲ್ಲ. ಹುಟ್ಟಿದ ಮಗು ಹೆಣ್ಣಾಯಿತೇ, ಅದನ್ನು ಸಾಕಿ ಸಲಹುವುದಕ್ಕೆ ಇತರ ಏರ್ಪಾಟು ಮಾಡುವರು; ಅಥವಾ ಅದೇನಾದರೂ ಗಂಡಾಯಿತೇ, ಅದನ್ನು ಕಾಡಿಗೆ ಕಳುಹಿಸಿ ಕೈಬಿಡುವರು.

ಶಾಲಾವತಿ, ಮನೆಗೆ ಯಾರಾದರೂ ತನ್ನನ್ನು ಅಪೇಕ್ಷಿಸಿ ಬಂದರೆ, ತನಗೆ ಸ್ವಸ್ಥವಿಲ್ಲವೆಂದು ನೆಪ ಹೇಳಿಕೊಂಡು, ತನ್ನ ಗುಟ್ಟಿನ ಸುಳಿವು ಹತ್ತೆಯಾಗದಂತೆ ಒಂಬತ್ತು ತಿಂಗಳು ಕಳೆದಳು. ಅದರ ಕಡೆಗೆ ಒಂದು ಗಂಡುಮಗುವನ್ನು ಹೆತ್ತಳು. ಅಂದಿನ ವಾಡಿಕೆಯಂತೆ, ನಿರ್ಯೋಚನೆಯಿಂದ ಆ ಮಗುವನ್ನು ಕಾಡಿಗೆ ಕಳುಹಿಸಿ ನಿಶ್ಚಿಂತೆಯಾದಳು. ಸೂತಕದ ದಿನ ಮುಗಿದ ಮೇಲೆ, ಸ್ನಾನಮಾಡಿ, ಅಲಂಕರಿಸಿಕೊಂಡು, ಮತ್ತೆ ಮೊದಲಿನಂತೆ ಮೆರೆದಳು.

ಶಾಲಾವತಿ ಹೀಗೆ ತನ್ನ ಮಗುವನ್ನು ಕಾಡಿನಲ್ಲಿ ತೊರೆಯಿಸಿಬಿಟ್ಟ ಅದೇ ದಿನವೇ ಅಭಯ ರಾಜಕುಮಾರನು ಅದೇ ಸ್ಥಳಕ್ಕೆ ವಿಹಾರಕ್ಕಾಗಿ ಬಂದಿದ್ದನು. ಅಲ್ಲಿ ಒಂದು ಕಡೆ ಕೆಲವೊಂದು ಕಾಗೆಗಳು ಏನನ್ನೋ ಮುತ್ತಿಕೊಂಡು ಕೂಗುತ್ತಿದ್ದುದನ್ನು ಕಂಡನು. ಅದೇನೋ ನೋಡಿಕೊಂಡುಬರುವಂತೆ ತನ್ನ ಪರಿವಾರದವರನ್ನು ಕಳಿಸಿದನು. ಅವರು

ಹೋಗಿ, ನೋಡಿ ಬಂದು ತಿಳಿಸಿದ ಮೇಲೆ ಅಭಯನು ತಾನೇ ಅಲ್ಲಿಗೆ ಹೋದನು.

ನೋಡಿದರೆ: ಆಗತಾನೇ ಹುಟ್ಟಿದ ಹಾಗಿದ್ದ ಒಂದು ಗಂಡುಮಗು ನಗುನಗುತ್ತಾ ಮಲಗಿದೆ. ಅದರ ಸುತ್ತಲೂ ಕಾಗೆಗಳು ಮುತ್ತಿಕೊಂಡಿವೆ. ಮಗುವಿನ ಮೈ ಮಾಂಸದಿಂದ ಆಕರ್ಷಕವಾಗಿದ್ದರೂ ಕಾಗೆಗಳು ಅದನ್ನು ಕೊಕ್ಕಿನಿಂದ ಮುಟ್ಟದೆ, ಮರುಕದಿಂದ ನೋಡುವಂತೆ ಸುಮ್ಮನಿವೆ.

ಅಭಯರಾಜಕುಮಾರನು ಆ ಮಗುವನ್ನು ನೋಡಿದನು. ಅದಕ್ಕೆ ತಾನೇ ತಂದೆಯಾದವನು ಎಂಬುದು ಅವನಿಗೆ ತಿಳಿಯಲಿಲ್ಲವಾದರೂ, ಆ ಮಗುವನ್ನು ಗಮನಿಸಿ, 'ಈ ಮಗುವನ್ನು ಎತ್ತಿಕೊಳ್ಳಿರಿ. ನಾವು ಇದನ್ನು ಸಾಕಿ ಸಲಹೋಣ.' ಎಂದನು.

ಮಗುವನ್ನು ನೋಡಿಕೊಂಡು ಬಂದಾಗ ಅವರು 'ಮಗು ಜೀವಿಸುತ್ತಿದೆ' ಎಂದು ಹೇಳಿದ್ದರಿಂದ, ಅಭಯನು ಆ ಮಗುವಿಗೆ 'ಜೀವಕ' ಎಂದು ನಾಮಕರಣಮಾಡಿದನು.

— ೨ —

ಜೀವಕನಿಗೆ ಏಳೆಂಟು ವಯಸ್ಸು ಆಗಿರುವಾಗ, ಒಮ್ಮೆ ಅವನು ತನ್ನ ಜೊತೆಯ ಬಾಲಕರೊಡನೆ ಆಟವಾಡುತ್ತಿದ್ದನು. ಆಗ ಯಾರೋ ಹುಡುಗರು "ತಾಯಿಯಿಲ್ಲದ ತಂದೆಯಿಲ್ಲದ ತಬ್ಬಲಿ" ಎಂದು ಅವನನ್ನು ಹಂಗಿಸಿದರು. ಜೀವಕ ಉತ್ತರ ಹೇಳಲಾರದೆ ನಾಚಿಕೊಂಡು ಕಣ್ಣೀರು ಸುರಿಸುತ್ತಾ ಅಭಯನ ಹತ್ತಿರ ಬಂದು, "ನನ್ನ ತಾಯಿ ಯಾರು? ತಂದೆ ಯಾರು?" ಎಂದು ಪ್ರಶ್ನಿಸಿದನು.

ಅಭಯನು ಮಗುವನ್ನು ನೋಡಿ ಮೃದುವಾಗಿ ನಗುತ್ತಾ "ಮಗು, ನಾನು ನಿನ್ನ ತಂದೆ. ತಾಯಿ ಯಾರೋ ನಾನು ಕಾಣೆ. ಕಾಡಿನಲ್ಲಿ ಯಾರೂ ಇಲ್ಲದೆ, ಕಾಗೆಗಳು ನಿನ್ನನ್ನು ಕಾಪಾಡುತ್ತಿರುವಾಗ, ನಾನು ಎತ್ತಿಕೊಂಡುಬಂದೆ." ಎಂದನು.

ಆಗ ಜೀವಕ ಚಿಂತಿಸಿದನು: "ನನಗೆ ಸ್ವಂತ ತಂದೆಯಿಲ್ಲ. ನನ್ನ ತಾಯಿ ಯಾರೋ ತಿಳಿಯದು. ಎಂದಮೇಲೆ, ತಬ್ಬಲಿಯಾದ ನಾನು

ಸ್ವಂತವಾಗಿ ಜೀವನೋಪಾಯುವನ್ನು ಸಂಪಾದಿಸಿಕೊಳ್ಳಲಾಗುವಂತೆ ಯಾವುದಾದರೂ ವಿದ್ಯೆ ಕಲಿತರೆ ಮೇಲು. ವಿದ್ಯೆ ಕಲಿತವನಿಗೆ ಐಶ್ವರ್ಯ ಬರುತ್ತದೆ, ಹೆಸರು ಬರುತ್ತದೆ, ಸ್ನೇಹಿತರು ಆಗುತ್ತಾರೆ."

ಹೀಗೆಂದುಕೊಂಡು, ಜೀವಕನು, ಯಾವ ವಿದ್ಯೆಯನ್ನು ಕಲಿತರೆ ವಾಸಿ, ಎಂದು ನೋಡಿದನು. ಆಗಿನ ಕಾಲದ ಹದಿನೆಂಟು ಶಾಸ್ತ್ರಗಳಲ್ಲಿ, ಅರುವತ್ತುನಾಲ್ಕು ಕಲೆಗಳಲ್ಲಿ, ವೈದ್ಯವನ್ನು ಕಲಿತರೆ ಅದು ಶಾಸ್ತ್ರಕ್ಕೆ ಶಾಸ್ತ್ರವೂ ಹೌದು, ಕಲೆಗೆ ಕಲೆಯೂ ಹೌದು ಎಂದುಕೊಂಡು, ಅದನ್ನು ಅಭ್ಯಾಸ ಮಾಡುವುದಕ್ಕೆ ತಕ್ಷಶಿಲೆಗೆ ಹೋಗುವುದೆಂದು ನಿರ್ಧರಿಸಿದನು. ತನ್ನ ನಿರ್ಧಾರವನ್ನು ಯಾರಿಗೂ ಹೇಳದೆ, ಆ ದಿನ ಸಿದ್ಧಾರ್ಥನು ಅರಮನೆಯಿಂದ ರಾತ್ರಿ ಕದ್ದು ಹೊರಟಂತೆ, ಹೊರಟುಹೋದನು.

ತಕ್ಷಶಿಲೆಯಲ್ಲಿ ಕುಲಪತಿಗಳು ಜೀವಕನ ತಾಯಿತಂದೆಯರನ್ನು ಕುರಿತು ಕೇಳಿದರು. ಇದ್ದುದನ್ನು ಇದ್ದಂತೆ ಹೇಳಿಕೊಂಡರೆ ತನಗೆ ಅವಮಾನ ಮಾಡಿಯಾರೋ ಏನೋ ಎಂದು ಅಂಜಿಕೊಂಡು, ಜೀವಕನು ತಾನು ಅಭಯರಾಜಕುಮಾರನ ಮಗನೆಂದೂ ಬಿಂಬಿಸಾರನ ಮೊಮ್ಮಗನೆಂದೂ ಒಂದು ಬಿಳಿಯ ಸುಳ್ಳು ಹೇಳಿದನು.

ವೈದ್ಯವನ್ನು ಕಲಿಯಲು ತಾನು ಬಂದಿರುವುದಾಗಿ ಅವನು ಬಿನ್ನವಿಸಿಕೊಂಡಾಗ, ಕುಲಪತಿ ಕೇಳಿದರು: "ಈ ಶಿಲ್ಪವನ್ನು ಕಲಿಯುವುದಕ್ಕಾಗಿ ನೀನು ತಂದಿರುವ ಶುಲ್ಕವೆಷ್ಟು?"

ಜೀವಕ ಹೇಳಿಕೊಂಡ: "ಇಷ್ಟು ದೂರ ಹೋಗುವೆನೆಂದರೆ, ಮನೆಯಲ್ಲಿ ಕಳುಹಿಸಲು ಒಪ್ಪುವರೋ ಇಲ್ಲವೋ ಎಂದು ಅಂಜಿ, ಹೇಳದೆಯೇ ಬಂದಿದ್ದೇನೆ. ಆದ್ದರಿಂದ ನಾನು ಶುಲ್ಕವೇನನ್ನೂ ತಂದಿಲ್ಲ. ಆದರೆ, ಇಲ್ಲಿ ತಾವು ಏನು ಹೇಳಿದರೆ ಆ ಪರಿಚರ್ಯೆ ಮಾಡಿ ತಮ್ಮ ಋಣವನ್ನು ತೀರಿಸುತ್ತೇನೆ."

ಆಗ ಕುಲಪತಿಗಳಿಗೆ ಎನ್ನಿಸಿತು: "ಹುಡುಗನಿಗೆ ವಿದ್ಯೆಯ ಹಂಬಲ ಇದೆ. ದಾಕ್ಷಿಣ್ಯಕವಾಗಿದ್ದಾನೆ. ಇವನ ಮುಖದಲ್ಲಿ ಪುಣ್ಯಮಾಡಿದವನ ಕಳೆ ಇದೆ. ಇಂಥವನಿಗೆ ಕೊಟ್ಟ ವಿದ್ಯೆ ಸತ್ಪಾತ್ರದಲ್ಲಿ ಸುರಿದ ದಾನದಂತೆ ಸಾರ್ಥಕ."

ಮಿಕ್ಕ ಶಿಷ್ಯರಿಗೆ ಒಂದೊಂದು ಸಾವಿರ ಚಿನ್ನದ ಹಣಗಳನ್ನು ಶುಲ್ಕ ವಾಗಿ ವಿಧಿಸುತ್ತಿದ್ದವರು ಜೀವಕನ ಪರಿಚರ್ಯೆಯಿಂದಲೇ ಪ್ರೀತರಾಗಿ ಅವನಿಗೆ ವಿದ್ಯೆಯನ್ನು ಕಲಿಸಲು ಒಪ್ಪಿದರು.

ಬೌದ್ಧರು ಹೇಳುತ್ತಾರೆ: ಆ ವೇಳೆಯಲ್ಲಿ, ಹೀಗೆ ಗುರು ಆ ಶಿಷ್ಯ ನನ್ನು ಕರೆದುಕೊಂಡಾಗ, ದೇವೇಂದ್ರನಿಗೆ ಸಿಂಹಾಸನಕಂಪವಾಯಿತಂತೆ. ಜೀವಕನು ತಾನು ಅನೇಕ ಜನ್ಮಗಳಿಂದ ಸಂಪಾದಿಸಿದ ಪುಣ್ಯದ ಫಲವಾಗಿ ಈ ಜನ್ಮದಲ್ಲಿ ಬುದ್ಧನಿಗೆ ಔಷಧ ಒಪ್ಪಿಸುವುದಕ್ಕೆ ಬೇಕಾದ ವಿದ್ಯೆಯನ್ನೂ ಅವನಿಗೆ ತಾನೇ ಸಾಂಗೋಪಾಂಗವಾಗಿ ಉಪದೇಶಮಾಡಿದನಂತೆ. 'ಈ ತೆರದ ವಿದ್ಯೆಯನ್ನು ಹೀಗೆ ಹೇಳಿಕೊಡುವುದು ಮನುಷ್ಯಮಾತ್ರನಿಗೆ ಸಾಧ್ಯವಿಲ್ಲ. ದೇವತೆಯೇ ಈ ರೂಪಿನಿಂದ ಹೇಳಿಕೊಡುತ್ತಿರಬೇಕು' ಎಂದು ಜೀವಕನಿಗೆ ಎನ್ನಿಸುತ್ತಿತ್ತಂತೆ. ತನ್ನ ವಿದ್ಯಾರ್ಜನೆಯ ಕಾಲ ದಲ್ಲಿಯೇ ಅನೇಕ ಸಲ ತನ್ನ ಗುರು ಕಾಣಲಾರದ ರೋಗನಿದಾನವನ್ನೂ ರೋಗಪರಿಹಾರವನ್ನೂ ಜೀವಕನು ಕಂಡುಕೊಂಡು ಪ್ರಯೋಗಮಾಡಿ ಗುಣಪಡಿಸುತ್ತಿದ್ದನಂತೆ.

ಹೀಗೆ ಜೀವಕನು ಏಳುವರ್ಷಗಳ ಕಾಲ ತಕ್ಷಶಿಲೆಯಲ್ಲಿ ವಿದ್ಯಾ ವ್ಯಾಸಂಗ ಮಾಡಿದನು. ಇತರ ಗುರುಗಳು ಹದಿನಾರು ವರ್ಷಗಳಲ್ಲಿ ಕಲಿಸುವುದನ್ನು ತಾನು ಏಳೇ ವರ್ಷಗಳಲ್ಲಿ ಕಲಿತನು.

ಕಡೆಗೆ ಗುರುವನ್ನು ಕೇಳಿದನು: "ನನ್ನ ವಿದ್ಯಾಭ್ಯಾಸ ಮುಗಿ ಯುವುದು ಎಂದು?"

ಅದಕ್ಕೆ ಆ ಗುರು ಅವನನ್ನು ಪರೀಕ್ಷಿಸಿ ನೋಡಬೇಕೆಂದು ಹೇಳಿ ದರು: "ಇನ್ನೇನು, ಮುಗಿದಂತೆಯೇ, ಜೀವಕ. ಈಗ ನೀನು ನಗರ ದಿಂದ ಹೊರಗೆ ಹೋಗಿ, ಒಂದು ನಾಲ್ಕು ದಿವಸಗಳ ಕಾಲ, ಒಂದು ಹತ್ತು ಮೈಲಿಗಳ ದೂರ ನೆಲವನ್ನೆಲ್ಲಾ ಚೆನ್ನಾಗಿ ಪರಿಶೋಧಿಸಿಕೊಂಡು ಬಾ. ಅಲ್ಲಿ ಯಾವ ಯಾವ ಬೇರು, ನಾರು, ಎಲೆ, ಹೂ, ತೊಗಟೆ ಹಣ್ಣು ನಮಗೆ ವೈದ್ಯದಲ್ಲಿ ಅಗತ್ಯವಿಲ್ಲವೆನಿಸುವುದೋ ಅವನ್ನು ಸಂಗ್ರಹಿಸಿ ಕೊಂಡು ತಾ. ಅನಂತರ ಹೇಳುತ್ತೇನೆ."

ಜೀವಕನು ಗುರುವಿನ ಆಜ್ಞೆಯಂತೆ ಹೋದನು, ನಾಲ್ಕು ದಿವಸ ತಿರುಗಿ ಆದ ಮೇಲೆ ಬಂದನು. "ಗುರುವೆ, ವೈದ್ಯರಿಗೆ ಇದು ಅನಗತ್ಯ ಎನಿಸುವಂತಹ ಬೇರು, ನಾರು, ಎಲೆ, ಹೂ, ತೊಗಟೆ, ಹಣ್ಣು ಯಾವುದನ್ನೂ ಈ ಹತ್ತು ಮೈಲಿಯೊಳಗೆ ನಾನು ಕಾಣಲಿಲ್ಲ. ಬರಿಯ ಈ ಹತ್ತು ಮೈಲಿ ಮಾತ್ರ ಏಕೆ, ಅಂತಹದು ಈ ಸರ್ವಜಗತ್ತಿನಲ್ಲೇ ಇಲ್ಲ ವೆಂದು ನನ್ನ ತಿಳಿವಳಿಕೆ." ಎಂದನು.

ಗುರು ಅವನನ್ನು ಬಹಳವಾಗಿ ಮೆಚ್ಚಿಕೊಂಡರು. "ಜೀವಕ, ಇನ್ನು ನಿನಗೆ ಕಲಿಸಬೇಕಾದದ್ದು ಯಾವುದೂ ಇಲ್ಲ, ನೀನು ಕಲಿಯ ಬೇಕಾದದ್ದೂ ಏನೂ ಇಲ್ಲ. ಇನ್ನು ನೀನು ನಿನ್ನ ಊರಿಗೆ ಹೋಗಬಹುದು." ಎಂದು ಅವನ ಪ್ರಯಾಣಕ್ಕೆ ಬೇಕಾದ ಪಾಥೇಯವನ್ನು ಸಿದ್ಧಗೊಳಿಸಿ, ಅವನ ಜೊತೆಗೆ ನಾಲ್ಕಾರು ಶಿಷ್ಯರನ್ನು ಕೊಟ್ಟು, ಆಶೀರ್ವಾದ ಮಾಡಿ ಕಳಿಸಿದರು.

— ೩ —

ಜೀವಕನು ತನ್ನ ಪ್ರಯಾಣಕಾಲದಲ್ಲಿ ವಿಶ್ರಮಿಸಿಕೊಳ್ಳುವುದಕ್ಕೋಸ್ಕರ ಸಾಕೇತದಲ್ಲಿ ನಿಲ್ಲಬೇಕಾಯಿತು.

ಆ ಕಾಲದಲ್ಲಿ, ಅದೇ ನಗರದ ಮುಖ್ಯ ಪ್ರಜೆಯೊಬ್ಬನ ಪತ್ನಿಗೆ ತಲೆಯಲ್ಲಿ ಅಸಾಧ್ಯವಾದ ನೋವು ಕಾಣಿಸಿಕೊಂಡಿತ್ತು. ಅವಳು ಏಳು ವರುಷಗಳಿಂದಲೂ ಹಾಗೇ ನರಳುತ್ತಿದ್ದಳಂತೆ. ಎಂಥೆಂಥವರೋ ವೈದ್ಯ ವಿದ್ವಾಂಸರುಗಳು ಏನೇನೋ ಔಷಧಿಗಳನ್ನು ಕೊಟ್ಟರು. ಅವರು ಕೊಟ್ಟದ್ದನ್ನೆಲ್ಲಾ ಅವಳು ತೆಗೆದುಕೊಂಡಳು. ಆದರೆ ಆ ಬಾಧೆ ಮಾತ್ರ ಒಂದು ಕ್ಷಣವೂ ಕಡಿಮೆಯಾಗಲಿಲ್ಲ.

ಅವಳ ಸ್ಥಿತಿ ಜೀವಕನ ಕಿವಿಗೆ ಬಿತ್ತು. "ಬಲ್ಲವನು ವೈದ್ಯನೊಬ್ಬ ಬಂದಿದ್ದೇನೆ" ಎಂದು ಅವರ ಮನೆಯ ಬಾಗಿಲಿಗೆ ಬಂದು, ಹೇಳಿಕಳಿಸಿದ. ಅವನನ್ನು ಒಳಗೆ ಕರೆಸಿಕೊಂಡರು. ಜೀವಕನು ಅವಳ ಸಮ್ಮುಖಕ್ಕೆ ಬಂದ. ಅವನ ಎಳೆಯ ವಯಸ್ಸನ್ನು ಗಮನಿಸಿ, ಅವಳ ಮುಖದ ಉತ್ಸಾಹ ಆರಿತು.

"ಜಂಬೂದ್ವೀಪದ ಮಹಾಮಹಾ ವೈದ್ಯರುಗಳೆಲ್ಲ ಔಷಧಿ ಕೊಟ್ಟರೂ ಅಡಗದಿರುವ ಈ ವೇದನೆ ಈ ಚಿಕ್ಕಮಗುವಿನ ಕೈಯಿಂದ ಗುಣವಾಗುತ್ತ ದೆಯೆ? ಪಾಪ, ಏನು ಹಸಿವೆಯೋ ಏನೋ, ಮನೆಗೆ ಬಂದಿದ್ದಾನೆ, ಊಟಮಾಡಿಕೊಂಡು ಹೋಗಲಿ. ಅಥವಾ, ಪಾಪ, ಬಡವ, ಏನಾದರೂ ಬೇಕೆಂದು ಕೇಳಿದರೆ, ಅದನ್ನು ಕೊಟ್ಟು ಕಳಿಸಿರಿ." ಎಂದಳು.

ಅದಕ್ಕೆ ಜೀವಕ ಹೇಳಿದ: "ಅಮ್ಮ! ಶಾಸ್ತ್ರಕ್ಕೆ ಮುಪ್ಪೆಂಬುದೇನು? ಎಳೆತನವೆಂಬುದೇನು? ವಿದ್ಯೆಗೆ ವಯಸ್ಸು ಒಂದೇ ಪ್ರಧಾನವಲ್ಲ. ನನ್ನ ವಯಸ್ಸು ಕಟ್ಟಿಕೊಂಡು ನಿಮಗೆ ಏನಾಗಬೇಕು? ನನ್ನ ಹಸ್ತಗುಣವನ್ನು ಪರೀಕ್ಷೆಮಾಡಿ ನೋಡಿ. ನಿಮ್ಮ ತಲೆಶೂಲೆ ಗುಣವಾಗುವವರೆಗೂ ನಾನು ಇಲ್ಲಿಂದ ಕದಲುವುದಿಲ್ಲ. ನನ್ನ ಪ್ರಯತ್ನ ಫಲವಾಗದೆ ಹೋಯಿತೇ, ನಿಮಗೇನೂ ನಷ್ಟವಿಲ್ಲ. ನನ್ನ ಪ್ರಯತ್ನ ಸಫಲವಾಯಿತೇ, ಆದರಿಂದ ನಮಗಿಬ್ಬರಿಗೂ ಲಾಭ."

ಜೀವಕನು ಮಾತನಾಡಿದ ರೀತಿ ಆಕೆಯ ಮನಸ್ಸಿಗೆ ಹಿಡಿಯಿತು. ಅವನಿಗೆ ಪೀಠವನ್ನು ಕೊಟ್ಟು. ಕುಳ್ಳಿರಹೇಳಿ, ತನ್ನ ಯಾತನೆಯನ್ನು ಹೇಳಿಕೊಂಡಳು: "ಕುಮಾರ, ನೀನು ಒಂದು ದಿವಸದ ಮಟ್ಟಿಗಾದರೂ ನನ್ನ ಈ ತಲೆಶೂಲೆಯನ್ನು ನಿಲ್ಲಿಸಬಲ್ಲೆಯಾದರೆ, ನನಗೆ ಎಷ್ಟೋ ನೆಮ್ಮದಿ ಯಾದೀತು. ನಾನು ನಿದ್ರೆ ಎಂಬುದನ್ನು ಕಂಡು ಏಳು ವರುಷ ಗಳಾದುವು."

ಜೀವಕ ಆಕೆಗೆ ಧೈರ್ಯ ಹೇಳಿದ. ತನ್ನ ಕೈಲಾದುದನ್ನೆಲ್ಲ ಮಾಡುವೆನೆಂದು ನಂಬಿಕೆ ಹೇಳಿದ. ಒಂದು ಸ್ವಲ್ಪ ಬೆಣ್ಣೆ ತರಿಸಿದ, ಅದನ್ನು ಕಾಯಿಸಿದ, ಅದನ್ನು ಅಂಗೈಗೆ ಬಿಟ್ಟುಕೊಂಡು ಅದರಲ್ಲಿ ಏನೋ ಔಷಧ ಬೆರೆಸಿದ. ಅದರಲ್ಲಿ ಅರ್ಧವನ್ನು ಅವಳ ಮೂಗಿಗೆ ಕೊಂಚ ಕೊಂಚವಾಗಿ ಹುಯಿದ, ಅದು ಅವಳ ಮೆದುಳಿಗೆ ಮುಟ್ಟುವಹಾಗೆ; ಉಳಿದ ಅರ್ಧವನ್ನು ಅವಳಿಗೆ ಬಾಯಿಂದ ಕುಡಿಸಿದ.

ಬಾಯಿಂದ ಕುಡಿಸಿದ್ದನ್ನು ಅವಳು ಉಗುಳಿಬಿಟ್ಟಳು. ಹತ್ತಿರ ದಲ್ಲಿಯೇ ನಿಂತಿದ್ದ ಅವಳ ಗಂಡ "ಆ ತುಪ್ಪವನ್ನು ಒಂದಿಷ್ಟು ಹತ್ತಿಯಲ್ಲಿ ಎತ್ತಿ ಇಡಿ." ಎಂದು ಸೇವಕರಿಗೆ ಹೇಳಿದ. ಅದನ್ನು ಕಂಡು, ಜೀವಕ

ಎಂದುಕೊಂಡ: "ಎಂಜಲಿನಲ್ಲಿ ಈಚೆ ಬಿದ್ದ ಇಷ್ಟು ಜಿಡ್ಡನ್ನೂ ಹೀಗೆ ಪೋಲಾಗದಂತೆ ಇವರು ಎತ್ತಿಡುವುದಾದರೆ, ಇವರು ನನಗೆ ಮಾಡುವ ಮರ್ಯಾದೆಯಿಂದ ನಾನು ಬಹು ಬೇಗ ಧನವಂತನಾಗಬಹುದು."

ಅವನ ಮುಖದಿಂದ ಅವನ ಇಂಗಿತವನ್ನು ಆ ಮನೆಯಾಕೆ ಗ್ರಹಿಸಿದಳು. ಹೇಳಿದಳು: "ಇಷ್ಟು ಜಿಡ್ಡು ಅನ್ಯಾಯವಾಗಿ ಹೋಗುತ್ತದೆಂದು ಅದನ್ನು ಬಳಿದಿಡಲು ಅವರು ಹೇಳಲಿಲ್ಲ; ಇಂಥ ಅಮೂಲ್ಯವಾದ ಔಷಧ ನಷ್ಟವಾಗಬಾರದೆಂದು, ಇದರಿಂದ ಮುಂದೆ ಏನಾದರೂ ಉಪಯೋಗವಾದೀತೆಂದು ಅದನ್ನು ಬಳಿದು ಎತ್ತಿಡಹೇಳಿದರು."

ಅನಂತರ ತನ್ನ ಗಂಡನಿಗೆ ಹೇಳಿದಳು: "ನಿಜವಾಗಿಯೂ ಈ ಹುಡುಗನ ಕೈಗುಣ ಅದ್ಭುತವಾಗಿದೆ. ಇವನ ಔಷಧ ಅಮೃತವಾಗಿದೆ. ನನ್ನ ತಲೆಶೂಲೆ ತಟಕ್ಕನೆ ನಿಂತು, ಇದುವರೆಗೆ ಕಾಣದ ನೆಮ್ಮದಿ ಈಗ ನನಗೆ ಲಭಿಸಿದೆ."

ಆಗ ಆ ಮನೆಯಾತ, ಮನೆಯಾಕೆ, ಮನೆಯ ಮಕ್ಕಳು, ಸೇವಕರು, ಪರಿಜನರು ಎಲ್ಲರೂ ಜೀವಕನನ್ನು ಕೊಂಡಾಡುವವರೇ. ಮನೆಯಾತ ಅವನಿಗೆ ನಾಲ್ಕು ಸಾವಿರ ಹೊನ್ನು ಕೊಟ್ಟು, ಹಲವಾರು ರಥಗಳನ್ನೂ ಬಹುಮತಿಯಾಗಿ ಕೊಟ್ಟನು. ಮನೆಯಾಕೆ ತಾನೂ ಅಷ್ಟು ದ್ರವ್ಯವನ್ನೂ ರಥಾದಿಗಳನ್ನೂ ಕೊಟ್ಟು. ಜೀವಕನನ್ನು ಸಂಭಾವಿಸಿದಳು. ಉಳಿದವರು ತಾವೂ ಯಥಾಶಕ್ತಿ ಅವನಿಗೆ ಮರ್ಯಾದೆ ಮಾಡಿದರು.

ಆಯೆಲ್ಲ ಸಂಪತ್ತನ್ನೂ ಸಂಪಾದಿಸಿಕೊಂಡು, ಮಹಾವೈವಭದಿಂದ ಜೀವಕನು ಸಾಕೇತದಿಂದ ತೆರಳಿ, ರಾಜಗೃಹವನ್ನು ಮುಟ್ಟಿದನು. ಅಲ್ಲಿ ಬಂದ ಮೇಲೆ, ತಾನು ತಂದದ್ದೆಲ್ಲವನ್ನೂ ತನ್ನ ಸಾಕುತಂದೆಯಾದ ಅಭಯರಾಜಕುಮಾರನ ಅಡಿಗಳಲ್ಲಿ ಅರ್ಪಿಸಿದನು.

"ತಂದೆಯೇ, ತಬ್ಬಲಿಯಾದ ನನ್ನನ್ನು ಸಾಕಿ ಸಲಹಿದ್ದಕ್ಕಾಗಿ ಇದೋ, ಇದು ನಿನಗೆ ನನ್ನ ಮೊದಲನೆಯ ದಕ್ಷಿಣೆ." ಎಂದು ನಮಸ್ಕರಿಸಿದನು.

ಆಗ ಅಭಯರಾಜಕುಮಾರನು ಹೇಳಿದನು: "ಮಗನೆ! ನೀನು ನಿಜವಾಗಿಯೂ ನನ್ನ ಮಗನೇ ಎಂಬ ವಸ್ತುಸ್ಥಿತಿ ಇತ್ತೀಚೆಗೆ ನನಗೆ ತಿಳಿ

ಯಿತು. ನಮ್ಮ ರಾಜಗೃಹದ ನಾಗರಸ್ತ್ರೀಯಾದ ದೇವಿ ಶಾಲಾವತಿಯೇ ನಿನ್ನ ತಾಯಿ. ನಾನೇ ನಿನ್ನ ತಂದೆ. ಆದ್ದರಿಂದ, ಆ ದಿನ ಕಾಡಿನಲ್ಲಿ ನಿನ್ನನ್ನು ಕಂಡಾಗ ನನ್ನ ಹೃದಯದಲ್ಲಿ ಉಂಟಾದದ್ದು ಬರಿಯ ಮರುಕ ವಷ್ಟೇ ಅಲ್ಲ, ಅದು ಪುತ್ರನ ಮೇಲೆ ಪಿತನಿಗೆ ಉಂಟಾದ ಸಹಜವಾದ ವಾತ್ಸಲ್ಯ."

ಅನಂತರ ಜೀವಕನು, ತಂದೆಯ ಸಲಹೆಯ ಪ್ರಕಾರ, ಅವನ ಅರಮನೆಯ ಸಮೀಪದಲ್ಲಿಯೇ ತಾನೂ ಒಂದು ಅರಮನೆಯನ್ನು ಕಟ್ಟಿಸಿ ಕೊಂಡು, ವೈದ್ಯವೃತ್ತಿಯನ್ನೆ ಕೈಕೊಂಡು, ರಾಜಗೃಹವನ್ನೇ ತನ್ನ ವಾಸ ಸ್ಥಾನವಾಗಿ ನಿಯಮಿಸಿಕೊಂಡನು.

— ೪ —

ಆ ಸಮಯದಲ್ಲಿ ಬಿಂಬಿಸಾರನಿಗೆ ಮೂಲವ್ಯಾಧಿಯ ಬಾಧೆಯಿತ್ತು. ಅದರಿಂದಾಗಿ ಅವನಿಗೇ ಅರಿವಿಲ್ಲದಂತೆ ಒಮ್ಮೊಮ್ಮೆ ಅವನ ವಸ್ತ್ರ ಕಲೆ ಯಾಗಿಬಿಡುತ್ತಿತ್ತು. ಅದಕ್ಕಾಗಿ ಅವನ ಅಂತಃಪುರ ಅವನನ್ನು ಹಾಸ್ಯ ಮಾಡುತ್ತಿತ್ತು. ಆ ಕಾರಣದಿಂದ ದೊರೆ ತುಂಬಾ ನಾಚಿಕೊಂಡು, ಅದರ ಪರಿಹಾರಕ್ಕಾಗಿ ಜಂಬೂದ್ವೀಪದ ಪ್ರಸಿದ್ಧ ವೈದ್ಯರನ್ನೆಲ್ಲಾ ವಿಚಾ ರಿಸಿ, ಅವರು ಹೇಳಿಹೇಳಿದ ಮದ್ದನ್ನೆಲ್ಲಾ ಮಾಡಿದ. ಆದರೆ ಯಾವುದ ರಿಂದಲೂ ಏನೂ ಗುಣ ಕಾಣಲಿಲ್ಲ.

ಜೀವಕನು ರಾಜಗೃಹಕ್ಕೆ ಬಂದ ತರುಣದಲ್ಲಿ ಒಮ್ಮೆ ಬಿಂಬಿಸಾರ ತನ್ನ ದುರವಸ್ಥೆಯನ್ನು ಅಭಯನ ಹತ್ತಿರ ಹೇಳಿಕೊಂಡ. ಜೀವಕನನ್ನು ಕರೆಸಿ ಕೇಳಿ ನೋಡಬಹುದೆಂದು ಅಭಯನು ಸಲಹೆಮಾಡಿದ. ಅದರಂತೆ ದೊರೆ, ಜೀವಕನನ್ನು ಕರೆಸಿಕೊಂಡು, ಏಕಾಂತದಲ್ಲಿ ಅವನಿಗೆ ತನ್ನ ವ್ಯಾಧಿಯ ಸ್ವರೂಪವನ್ನು ನಿರೂಪಿಸಿದನು.

ಜೀವಕನಿಗೆ ರಾಜನ ಸಮುಖಕ್ಕೆ ಹೋಗುವ ಮೊದಲೇ ಅವನ ವ್ಯಾಧಿಯ ವಿಚಾರ ತಿಳಿದಿದ್ದರಿಂದ, ಹೋಗುವಾಗ ತನ್ನ ಕೈಯುಗುರಿನ ಒಳಗೆ ಇಷ್ಟು ಔಷಧ ತೆಗೆದುಕೊಂಡು ಹೋಗಿದ್ದ. ದೊರೆ ತನ್ನ ಸಂಕಟ ವನ್ನು ಹೇಳಿಕೊಂಡ ಬಳಿಕ, ತಾನು ತಂದಿದ್ದುದನ್ನು ಅವನ ಮೂಲಕ್ಕೆ

ಲೇಪಿಸಿದ. ಆ ಕ್ಷಣವೇ ಅಲ್ಲಿನ ಉರಿ ಶಾಂತವಾಗಿ ತಂಪಾಯಿತು. ಮತ್ತೆ ದೊರೆಗೆ ಆ ವ್ಯಾಧಿಯ ಕಾಟ ಕಾಣಿಸಿಕೊಳ್ಳಲಿಲ್ಲ. ಅದು ಹೇಗೆ ಅಷ್ಟು ಬೇಗ ಮಾಯವಾಯಿತೋ, ಬಿಂಬಿಸಾರನಿಗೇ ಆಶ್ಚರ್ಯ.

ಆಗ ಬಿಂಬಿಸಾರನಿಗೆನ್ನಿಸಿತು: "ಇಷ್ಟು ಅಸಾಧಾರಣವಾದ ವಿದ್ಯೆಯುಳ್ಳವನಿಗೆ ಸತ್ಕಾರಮಾಡುವುದು ತಕ್ಕದ್ದು. ಆದರೆ ಇವನು ಗುಣಶಾಲಿಯಾಗಿದ್ದರೆ ಮಾತ್ರ, ಇವನಿಂದ ನಮ್ಮ ನಗರಕ್ಕೆ ಕ್ಷೇಮ; ಅಲ್ಲದೆ, ಇವನು ಅವಗುಣಿಯಾಗಿದ್ದರೆ, ಇಂಥವನಿಂದ ನಮ್ಮ ರಾಜ್ಯಕ್ಕೆ ಎಂದಿದ್ದರೂ ಆಪತ್ತೇ. ಆದ್ದರಿಂದ ಇವನನ್ನು ಇಲ್ಲೇ ಉಳಿಸಿಕೊಳ್ಳುವುದೇ ಅಥವಾ ಕಳಿಸಿಬಿಡುವುದೇ ಎಂಬುದನ್ನು ಪರೀಕ್ಷೆಮಾಡಬೇಕು."

ಬಿಂಬಿಸಾರನು ಹಾಗೆಂದುಕೊಂಡು, ತನ್ನ ರೋಗ ಗುಣವಾದುದನ್ನು ತನ್ನ ಅಂತಃಪುರದವರಿಗೆ ಹೇಳಿಕೊಂಡನು. "ನಾಳಿನ ಸಭೆಯಲ್ಲಿ ಅವನಿಗೆ ತಕ್ಕ ಮರ್ಯಾದೆ ಮಾಡಬೇಕೆಂದಿದ್ದೇನೆ. ನೀವೂ ನಿಮಗೆ ಉಚಿತವೆನ್ನಿಸಿದ ಪಾರಿತೋಷಕಗಳನ್ನು ಅವನಿಗೆ ಕೊಡಬಹುದು." ಎಂದನು.

ಮಾರನೆಯ ದಿವಸದ ಸಭೆಯಲ್ಲಿ, ಅರಸನು ಕೊಟ್ಟ ಅನೇಕ ಅನರ್ಘ್ಯವಾದ ವಸ್ತ್ರಾಭರಣಗಳ ಜೊತೆಗೆ ಅಂತಃಪುರದವರು ಒಬ್ಬೊಬ್ಬರೂ ಅವನಿಗೆ ರಾಜಯೋಗ್ಯವಾದ ರತ್ನಾಭರಣಗಳನ್ನು ಕೊಟ್ಟು ಸನ್ಮಾನ ಮಾಡಿದರು. ಆ ಬಹುಮಾನಗಳ ರಾಶಿ ಬರುತ್ತ ಬರುತ್ತ ಬೆಟ್ಟದಂತೆ ಬೆಳೆಯಿತು.

ಆಸ್ಥಾನದವರೆಲ್ಲಾ ಹಾಗೆ ಮಿತಿಮೀರಿದ ಬಹುಮಾನದ ರಾಶಿ ಬೆಳೆಯುತ್ತಿರುವುದನ್ನು ಕಂಡು, "ಇವನೇನು ಮಾಡುವನೋ ಕಾಣೆವಲ್ಲ! ಇಷ್ಟನ್ನೂ ಇವನು ಒಪ್ಪಿಕೊಳ್ಳದಿದ್ದರೆ ವಾಸಿ!" ಎಂದು ಒಳಗೊಳಗೇ ಆಶಿಸುತ್ತಿದ್ದರು.

ಜೀವಕನಿಗಾದರೂ ತನಗೆ ಹೀಗೆ ಮಿತಿಮೀರಿ ಮರ್ಯಾದೆ ಮಾಡುವುದು ಏಕೋ ಸಹಜವಾಗಿ ಕಾಣಲಿಲ್ಲ. ಆದರಿಂದಾಗಿ ಅವನು ಆ ರಾಶಿಯೆಲ್ಲ ತನ್ನ ಕಣ್ಣ ಮುಂದೆ ಬೆಳೆದರೂ ಅದನ್ನು ಮುಟ್ಟದೆ, "ದೊರೆಯೆ, ನಿಮ್ಮ ರಾಜ್ಯದ ಪ್ರಜೆಗಳಲ್ಲಿ ಒಬ್ಬನಾದ ನಾನು ಈ ರಾಜಯೋಗ್ಯವಾದ ವಸ್ತ್ರಾಭರಣಗಳನ್ನು ಸ್ವೀಕರಿಸಿ ಬಳಸುವುದು ಸರ್ವಥಾ ಸರಿಯಲ್ಲ.

ಇದರ ದಾನಕ್ಕಾಗಿ ನಿಮಗೆ ನಾನು ಕೃತಜ್ಞನಾಗಿದ್ದರೂ ನನಗೆ ಇವೆಲ್ಲಾ ಅಗತ್ಯವಿಲ್ಲ. ನಿಮ್ಮ ಕೃಪಾದೃಷ್ಟಿ ನನ್ನ ಕಡೆಗಿರಲಿ, ನಿಮ್ಮ ದಯಾರಕ್ಷೆ ನನ್ನ ಮೇಲಿರಲಿ, ಎಂದಿಷ್ಟೇ ನಾನು ನಿಮ್ಮಲ್ಲಿ ಬೇಡುವುದು." ಎಂದು ಬಿನ್ನವಿಸಿಕೊಂಡನು.

ಬಿಂಬಿಸಾರನಿಗೆ ತುಂಬ ಸಂತೋಷವಾಯಿತು. ಅವನಿಗೆ ಅನೇಕ ಉದ್ಯಾನವನಗಳನ್ನೂ ಗ್ರಾಮಗಳನ್ನೂ ತನ್ನ ಸಂತೋಷದ ಸೂಚನೆಗಾಗಿ ಕೊಟ್ಟು, ಅಂದಿನಿಂದ ಅವನೊಡನೆ ಸ್ನೇಹಿತನೊಡನೆ ಹೇಗೋ ಹಾಗೆ ವರ್ತಿಸತೊಡಗಿದನು.

— ೫ —

ರಾಜಗೃಹದಲ್ಲಿ ಇನ್ನೊಬ್ಬ ಧನಿಕ, ದೊರೆಗೆ ತುಂಬ ಬೇಕಾದವನು. ಅವನಿಗೂ ಬಹುದಿವಸದಿಂದ ತಲೆಶೂಲೆ, ಕತ್ತಿ ಹಾಕಿ ತಲೆಯ ಒಳಗನ್ನು ಕೊರೆದ ಹಾಗೆ. ಆ ಧನಿಕ ತನ್ನ ಶೂಲೆಯ ಪರಿಹಾರಕ್ಕೆ ಇಬ್ಬರು ವೈದ್ಯರ ಸಲಹೆಯನ್ನು ಕೋರಿದ. ಅವರು ಅವನನ್ನು ಪರೀಕ್ಷೆಮಾಡಿ, "ಇದಕ್ಕೆ ಪರಿಹಾರವೇ ಇಲ್ಲ." ಎಂದುಬಿಟ್ಟರು. ಒಬ್ಬ ಹೇಳಿದ : "ಇಂದಿನಿಂದ ಐದನೆಯ ದಿನಕ್ಕೆ ನಿನ್ನ ಮರಣ." ಇನ್ನೊಬ್ಬ ಹೇಳಿದ : "ಇಂದಿನಿಂದ ಏಳನೆಯ ದಿನಕ್ಕೆ ನಿನ್ನ ಮರಣ."

ತನಗೆ ಆಪ್ತನಾದ ಧನಿಕನು ಐದೋ ಏಳೋ ದಿನಗಳಲ್ಲಿ ಮರಣ ಹೊಂದುವನೆಂದು ಕೇಳಿ, ದೊರೆಗೆ ಕಳವಳವಾಯಿತು. ಜೀವಕನನ್ನು ಕರೆದು, "ನೀನು ಏನಾದರೂ ಮಾಡಲು ಆಗುವುದೋ ನೋಡು." ಎಂದನು.

ಜೀವಕನು ಹೋಗಿ, ಪರೀಕ್ಷೆಮಾಡಿ ಬಂದನು.

"ದೊರೆಯೆ, ಅವನ ತಲೆಯೊಳಗೆ ಎರಡು ಹುಳುಗಳಿವೆ. ಒಂದು ದೊಡ್ಡದು, ಒಂದು ಸಣ್ಣದು. ಆ ದೊಡ್ಡದರಿಂದ ಏಳು ದಿವಸಕ್ಕೆ ಮರಣ; ಆ ಚಿಕ್ಕದರಿಂದ ಐದು ದಿವಸಕ್ಕೆ ಸಾವು. ಆ ವೈದ್ಯರಲ್ಲಿ ಒಬ್ಬನು ದೊಡ್ಡದನ್ನು ಮಾತ್ರ ಕಂಡ, ಇನ್ನೊಬ್ಬನು ಚಿಕ್ಕದನ್ನು ಮಾತ್ರ ಕಂಡ.

ಆ ಎರಡು ಹುಳುಗಳಿಗೂ ಏನು ಮಾಡಬೇಕೆಂಬುದನ್ನು ನಾನು ಬಲ್ಲೆ. ಇನ್ನು ಮೂರು ದಿವಸಗಳೊಳಗಾಗಿ ಅವನ ಅಪಾಯವನ್ನು ನಾನು ತಪ್ಪಿಸುತ್ತೇನೆ. ನಿನಗೆ ಕಳವಳ ಬೇಡ, ದೊರೆಯೆ."

ಆ ಧನಿಕನಿಗೋ, ಹೇಳಲಾಗದ ಜೀವಭಯ. "ನೀನು ನನ್ನ ಸಾವನ್ನು ಮಾತ್ರ ತಪ್ಪಿಸು; ನಾನೂ ನನ್ನವರೂ ನಿನ್ನ ದಾಸರಾಗುತ್ತೇವೆ, ನನ್ನ ಐಶ್ವರ್ಯವನ್ನೆಲ್ಲಾ ನಿನಗೆ ಒಪ್ಪಿಸುತ್ತೇನೆ." ಎಂದು ಬೇಡಿಕೊಂಡನು.

ಜೀವಕ ಅವನಿಗೆ ಅಭಯ ಹೇಳಿದನು: "ಹೆದರಿಕೆಗೆ ಏನೂ ಕಾರಣವಿಲ್ಲ. ನಾನು ಖಂಡಿತ ಗುಣಪಡಿಸುತ್ತೇನೆ. ಆದರೆ ಒಂದು ನನ್ನ ಪ್ರಾರ್ಥನೆ : ನೀನು ಮಾತ್ರ ಏಳು ತಿಂಗಳ ಕಾಲ ಬೆನ್ನಡಿಯಾಗಿ, ಇನ್ನು ಏಳು ತಿಂಗಳಕಾಲ ಬಲಮಗ್ಗುಲಾಗಿ, ಮತ್ತೆ ಏಳು ತಿಂಗಳ ಕಾಲ ಎಡಮಗ್ಗುಲಾಗಿ, ಒಟ್ಟು ಇಪ್ಪತ್ತೊಂದು ತಿಂಗಳು ಕಾಲ ಹಾಸಿಗೆಯನ್ನು ಬಿಟ್ಟು ಏಳದೆ ಒಂದೇ ಕಡೆ ಮಲಗಿರಬೇಕು. ಮತ್ತೆ, ಇನ್ನೂ ಒಂದು ವಿಷಯ : ನಾನು ನಡಸುವ ಚಿಕಿತ್ಸೆಯಲ್ಲಿ ನಿನಗೇನಾದರೂ ನೋವು ಉಂಟಾದರೆ, ದಯಮಾಡಿ ಅದನ್ನು ನನ್ನಲ್ಲಿ ದೋಷವೆಂದು ಎಣಿಸಬೇಡ. ತಾಯಿತಂದೆಗಳೂ ಗುರುಹಿರಿಯರೂ ಮಕ್ಕಳನ್ನು ದಂಡಿಸಿದರೆ, ಅದು ಅವರನ್ನು ವಿಧೇಯತೆಗೆ ನಡಸುವುದಕ್ಕೆ ಮಾತ್ರ; ಹಾಗೆಯೇ ವೈದ್ಯರಾದವರಿಂದ ರೋಗಿಗಳಿಗೆ ಏನಾದರೂ ಯಾತನೆಯುಂಟಾದರೆ, ಅದು ಅವರನ್ನು ಆರೋಗ್ಯಕ್ಕೆ ನಡಸುವುದಕ್ಕೆ ಮಾತ್ರ. ಆದ್ದರಿಂದ, ನನ್ನ ಮಾತುಗಳನ್ನು ಗಮನಿಸಬೇಕು." ಎಂದು ಕೇಳಿಕೊಂಡನು.

ಧನಿಕನು ಜೀವಕನು ಹೇಳಿದ್ದಕ್ಕೆಲ್ಲ ಒಪ್ಪಿಕೊಂಡನು. ಸದ್ಯಃ, ಸಾಯದೆ ಬದುಕಿದ್ದರೆ, ಸಾಕು, ಎಂದು ಅವನ ಹಂಬಲ.

ಧನಿಕನನ್ನು ಜೀವಕನು ಮನೆಯ ಉಪ್ಪರಿಗೆಯ ಕೊಠಡಿಯಲ್ಲಿ ಮಲಗಿಸಿ, ಅವನ ತಲೆಯ ಹಿಂದುಗಡೆ ಕುಳಿತು, ತನ್ನ ಶಸ್ತ್ರದಿಂದ ಅವನ ತಲೆಯ ಬುರುಡೆಯನ್ನು ಬಿಡಿಸಿದನು. ಒಳಗೆ ಮಿದುಳನ್ನು ತಿನ್ನುತ್ತಿದ್ದ ಎರಡು ಹುಳುಗಳನ್ನೂ ಕೈಇಕ್ಕುಳದಿಂದ ಈಚೆಗೆ ತೆಗೆದನು. ಅವುಗಳಲ್ಲಿ ಒಂದು ಐದು ದಿವಸದಲ್ಲಿ ಸಾವು ತರುವಂಥದು, ಒಂದು ಏಳು

ದಿವಸದಲ್ಲಿ ಕೊಲ್ಲುವಂಥದು. ಅವುಗಳನ್ನು ತೆಗೆದ ಮೇಲೆ, ಮತ್ತೆ ಆ ಬಿಡಿಸಿದ ಭಾಗವನ್ನು ಹೊಲಿಗೆಯ ಗುರುತೇ ಕಾಣದಂತೆ ಹೊಲಿದನು.

ಅನಂತರ ಹೇಳಿದನು : "ಹುಳುಗಳನ್ನು ತೆಗೆದಹಾಗಾಯಿತು. ಈಗ, ಇಪ್ಪತ್ತೊಂದು ತಿಂಗಳು ವಿಶ್ರಾಂತಿಯಿಂದ ಮಲಗಿರುವುದಾಗಿ ಮಾತು ಕೊಟ್ಟಿರುವೆ. ಬೇರೆ ಯಾರಾದರೂ ಇದೇ ಶಸ್ತ್ರಚಿಕಿತ್ಸೆ ನಡೆಸಿದ್ದರೆ, ಇಪ್ಪತ್ತೊಂದು ತಿಂಗಳು ವಿಶ್ರಾಂತಿ ಬೇಕಾಗುತ್ತಿತ್ತು. ಆದರೆ ನಾನು ಚಿಕಿತ್ಸೆ ಮಾಡಿರುವುದರಿಂದ, ಕೇವಲ ಇಪ್ಪತ್ತೊಂದು ದಿವಸಗಳ ವಿಶ್ರಾಂತಿ ಸಾಕು."

ಧನಿಕನು ಆ ಚಿಕಿತ್ಸೆಯಿಂದ ಆದ ಗುಣವನ್ನು ಆಗಿನಿಂದಲೇ ಅನುಭವಿಸುತ್ತ, ಜೀವಕನಿಗೆ ಅಪಾರವಾದ ಧನದ ರಾಶಿಯನ್ನು ನೀಡಿದನು. ಆದರೆ ಜೀವಕನು ಅದನ್ನು ಸ್ವೀಕರಿಸಲು ಒಪ್ಪಲಿಲ್ಲ. ಕಡೆಗೆ ಅವನ ಬಲವಂತಕ್ಕೆ ಕಟ್ಟುಬಿದ್ದು ಒಂದು ಲಕ್ಷದಷ್ಟು ದ್ರವ್ಯವನ್ನು ತೆಗೆದುಕೊಂಡೇ ತೀರಬೇಕಾಯಿತು. ಜೊತೆಗೆ, ತನಗೆ ಬೇಕಾದವನು ಬದುಕಿಕೊಂಡನೆಂಬ ಸಂತೋಷದಿಂದ ಬಿಂಬಿಸಾರನು ತಾನೂ ಒಂದು ಲಕ್ಷದಷ್ಟು ದ್ರವ್ಯವನ್ನು ಜೀವಕನಿಗೆ ದಾನಮಾಡಿದನು.

ಜೀವಕನ ಖ್ಯಾತಿ, ಜಂಬೂದ್ವೀಪದ ಧ್ವಜದೋಪಾದಿಯಲ್ಲಿ, ಹತ್ತು ದಿಕ್ಕುಗಳಿಗೂ ಹಾರಿಹರಡಿತು.

— ೬ —

ವಾರಾಣಸೀ ನಗರದಲ್ಲಿ ಇನ್ನೊಬ್ಬ ನಾಗರಿಕ. ಅವನು ತನ್ನ ಯೌವನಾವಸ್ಥೆಯಲ್ಲಿ ತಾನು ಎಷ್ಟು ದೂರ ನೆಗೆಯಬಲ್ಲೆನೆಂಬುದನ್ನು ತೋರಿಸುವುದಕ್ಕೆ ಹೊರಟು, ಆ ಪ್ರಯತ್ನದಲ್ಲಿ ಅವನ ಕರುಳು ಗಂಟು ಹಾಕಿಕೊಂಡಿತ್ತು. ಅಂದಿನಿಂದ ಯಾವ ಗಟ್ಟಿಪದಾರ್ಥವನ್ನು ಅಗಿದು ತಿಂದರೂ ಅವನಿಗೆ ಜೀರ್ಣವಾಗುತ್ತಿರಲಿಲ್ಲ. ಜೀವಧಾರಣೆಗೆ ಎಷ್ಟೋ ಅಷ್ಟು ಮಾತ್ರ ದ್ರವರೂಪದ ಆಹಾರವನ್ನು ನುಂಗಿಕೊಂಡು ಬದುಕಿದ್ದ. ಕೊಳ್ಳೆಹೋಗುವಷ್ಟು ಹಣ ಮನೆಯಲ್ಲಿ ತುಂಬಿದ್ದರೂ, ಅವನಿಗೆ ಹೊಟ್ಟೆಯ ತುಂಬ ಹಿಟ್ಟು ಇಲ್ಲವಾಗಿತ್ತು. ಕ್ರಮೇಣ ಅವನ ಮೈ ಒಣಗಿ ಒಣಗಿ

ಬೆಂಡಾದ ಮರದ ತುಂಡಿನಂತಾಯಿತು. ಮೂಳೆಗಳ ಮಧ್ಯದ ರಂಧ್ರಗಳಲ್ಲಿ ಎಣ್ಣೆಯನ್ನು ಸುರಿದು, ಪಾತ್ರೆಯಲ್ಲಿ ತುಂಬಿದಂತೆ ತುಂಬಬಹುದಾಗಿತ್ತು.

ಜಂಬೂದ್ವೀಪದ ಮೂಲೆಮೂಲೆಗಳಿಂದಲೂ ವೈದ್ಯರುಗಳು ಅವನ ಮನೆಯ ಬಾಗಿಲಿಗೆ ಬಂದು ಮುತ್ತಿ, ತಾವು ಕಲಿತ ವಿದ್ಯೆಯನ್ನೆಲ್ಲಾ ಪ್ರಯೋಗಿಸಿದರು. ಕಡೆಗೆ, ಅದು ತಮ್ಮ ಕೈಗೆ ಮೀರಿದ್ದೆಂದು ಸೋಲನ್ನು ಒಪ್ಪಿಕೊಂಡು, ಬಂದ ದಾರಿಗೆ ಸುಂಕವಿಲ್ಲವೆಂದು ಹಿಂತಿರುಗಿದರು.

ಹೀಗೇ ಇರಬೇಕಾದರೆ, ಹೊಸದಾಗಿ ರಾಜಗೃಹಕ್ಕೆ ಬಂದು ಹೆಸರುವಾಸಿಯಾದ ಜೀವಕನ ವೃತ್ತಾಂತವು ಆ ನಾಗರಿಕನ ತಂದೆಯ ಕಿವಿಗೆ ಬಿತ್ತು. ಅವನು ಆ ಕೂಡಲೆ ರಾಜಗೃಹಕ್ಕೆ ಪ್ರಯಾಣಮಾಡಿದನು. ಅಲ್ಲಿ ಬಿಂಬಿಸಾರರಾಜನನ್ನು ದರ್ಶನಮಾಡಿ, ಅವನಿಗೆ ತಾನು ತಂದಿದ್ದ ಕಾಣಿಕೆಗಳನ್ನು ಕೈಗೊಪ್ಪಿಸಿದ ಮೇಲೆ, ತಾನು ಬಂದ ಕಾರ್ಯವನ್ನು ಬಿನ್ನವಿಸಿಕೊಂಡನು. "ದಯೆಮಾಡಿ, ಜೀವಕನನ್ನು ಕಳುಹಿಸಿಕೊಟ್ಟು, ನನ್ನ ಮಗನಿಗೆ ಜೀವದಾನಮಾಡಬೇಕು." ಎಂದು ಬೇಡಿಕೊಂಡನು.

ಬಿಂಬಿಸಾರನ ಕೋರಿಕೆಯ ಮೇರೆ ಜೀವಕನು ಆ ತಂದೆಯ ಜೊತೆಯಲ್ಲಿ ವಾರಾಣಸೀನಗರಕ್ಕೆ ಹೋದನು. ಅಲ್ಲಿ ಅವನ ಮಗನನ್ನು ಕಂಡನು. ಅವನ ಬೇನೆಯ ಪೂರ್ವೋತ್ತರಗಳನ್ನು ವಿಚಾರಿಸಿಕೊಂಡನು. ತಂದೆಗೆ ಧೈರ್ಯ ಹೇಳಿದನು, ಗುಣಪಡಿಸುವೆನೆಂದು ಆ ಮಗನಿಗೆ ನಂಬಿಕೆ ಹೇಳಿದನು.

ಅನಂತರ ಜೀವಕನು "ಈ ರೋಗಿಯೂ ಇವನ ಪತ್ನಿಯೂ ಹೊರತಾಗಿ ಉಳಿದವರೆಲ್ಲರೂ ಇಲ್ಲಿಂದ ಹೊರಡಿ." ಎಂದು ಅವರೆಲ್ಲರನ್ನೂ ಕಳುಹಿಸಿ, ಕೊಠಡಿಯ ಬಾಗಿಲು ಮುಚ್ಚಿದನು. ಆ ಕರುಳು ಗಂಟುಹಾಕಿಕೊಂಡಿದ್ದವನನ್ನು ಕೈಕಾಲು ಆಡಿಸದ ಹಾಗೆ ಕಂಭಕ್ಕೆ ಕಟ್ಟಿಹಾಕಿದನು. ಅವನ ಮುಖಕ್ಕೆ ಒಂದು ವಸ್ತ್ರವನ್ನು ಮರೆಮಾಡಿ, ಅದನ್ನು ಭದ್ರವಾಗಿ ಬಿಗಿದನು. ಅನಂತರ, ಒಂದು ಹರಿತವಾದ ಶಸ್ತ್ರವನ್ನು ಕೈಗೆತ್ತಿಕೊಂಡು, ಏನಾಗುತ್ತಿದೆಯೆಂದು ಆ ರೋಗಿಗೆ ಸುಳಿವೇ ಆಗದ ರೀತಿಯಲ್ಲಿ ಅವನ ಹೊಟ್ಟೆಯ ಚರ್ಮವನ್ನು ಸೀಳಿ, ಒಳಗಿನಿಂದ ಅವನ ಕರುಳನ್ನು ಹೊರಗೆ

ತೆಗೆದು, ಅದು ಗಂಟುಹಾಕಿಕೊಂಡಿದ್ದ ರೀತಿಯನ್ನು ಅವನ ಹೆಂಡತಿಗೆ ತೋರಿಸಿ, ಆ ಗಂಟನ್ನು ಬಿಡಿಸಿ, ಆ ಕರುಳನ್ನು ಸ್ವಸ್ಥಾನದಲ್ಲಿ ಇರಿಸಿ, ಚರ್ಮವನ್ನು ಹೊಲಿದನು. ಹೊಲಿಗೆಯ ಮೇಲೆ ಏನೋ ಲೇಪವನ್ನು ಬಳಿದು, ಅವನನ್ನು ಕಂಭಕ್ಕೆ ಕಟ್ಟಿದ್ದ ಕಟ್ಟುಗಳನ್ನು ಬಿಚ್ಚಿ, ಹಾಸಿಗೆಯಲ್ಲಿ ಮಲಗಿಸಿದನು. ಮೂರು ದಿವಸ ಅವನನ್ನು ಅಕ್ಕಿಯ ಗಂಜಿಯ ಪಥ್ಯ ದಲ್ಲಿರಿಸಿದನು.

ಮೂರನೆಯ ದಿನ ಅವನು ಎದ್ದು ಓಡಾಡುವಂತಾಯಿತು. ಅವನ ಪ್ರಕೃತಿ ಕ್ರಮೇಣ ಉತ್ತಮವಾಯಿತು.

ಅವನ ತಂದೆ ಜೀವಕನನ್ನು ತುಂಬ ಕೊಂಡಾಡಿದನು. ಹದಿನಾರು ಸಾವಿರ ಹೊನ್ನುಗಳನ್ನೂ ಅನೇಕವಾಗಿ ರಥ ಕುದುರೆ ಗೋವುಗಳನ್ನೂ ದಾಸದಾಸಿಯರನ್ನೂ ತನ್ನ ಸಂತೋಷದ ಸೂಚಕವಾಗಿ ಕೊಟ್ಟನು. ಜೀವಕನು ಹೀಗೆ ಸನ್ಮಾನ ಪಡೆದು, ರಾಜಗೃಹಕ್ಕೆ ಹಿಂದಿರುಗಿದನು.

ದೇಶದೇಶಾಂತರಗಳಿಂದ ನಾನಾ ರೀತಿಯ ನಾನಾ ರೋಗದ ಜನ ಜೀವಕನನ್ನು ಅರಸಿಕೊಂಡು ಬರುವರು, ಅಮೃತವನ್ನು ಹುಡುಕಿಕೊಂಡು ಬರುವಂತೆ ಅವನನ್ನು ಹುಡುಕಿಕೊಂಡು ಬರುವರು.

— ೭ —

ಜೀವಕನ ಸಹಾಯವನ್ನು ಕೋರಿಬರುತ್ತಿದ್ದವರು ಕೇವಲ ಜನ ಸಾಮಾನ್ಯರು ಮಾತ್ರವಲ್ಲ. ರಾಜನಾದ ಬಿಂಬಿಸಾರನು ಕೂಡ ಜೀವಕನ ಹಸ್ತಗುಣದಿಂದ ಹೇಗೆ ಸ್ವಸ್ಥವಾದನೆಂಬುದನ್ನು ಕೇಳಿದ್ದೀರಿ. ಹೀಗೆಯೇ ಅವನಿಂದ ಉಪಕೃತನಾದ ದೊರೆ ಇನ್ನೊಬ್ಬನೆಂದರೆ: ಉಜ್ಜಯಿನಿಗೆ ರಾಜ ನಾದ ಚಂಡಪ್ರದ್ಯೋತ.

ಅವನಿಗೆ ಕಾಮಾಲೆ. ಅವನು ಕೂಡ ಜೀವಕನ ಸಹಾಯವನ್ನು ಕೋರಿ, ಬಿಂಬಿಸಾರನಿಗೆ ಅನೇಕ ರಾಜಯೋಗ್ಯವಾದ ಉಪಾಯನಗಳನ್ನು ಕಳುಹಿಸಿ, "ಜೀವಕನನ್ನು ಕಳಿಸಿಕೊಡು" ಎಂದು ಪ್ರಾರ್ಥಿಸಿದ್ದ.

ಬಿಂಬಿಸಾರ ಎಷ್ಟೆಷ್ಟೋ ಹೇಳಿದರೂ ಜೀವಕ ಪ್ರದ್ಯೋತನೆಡೆಗೆ ಹೋಗಲು ಇಚ್ಛಿಸಲಿಲ್ಲ. ಇದಕ್ಕೆ ಕಾರಣವೂ ಇಲ್ಲದಿರಲಿಲ್ಲ. ಪ್ರದ್ಯೋತ

ನಿಗೆ ಯಾವ ತೆರದ ಜಿಡ್ಡು ಎಂದರೂ ಸಹಿಸುವುದಕ್ಕಾಗದು. ಅವನ ಆಹಾರದಲ್ಲಿ ಯಾವ ತೈಲವೂ ಯಾವ ಘೃತವೂ ಮಿಶ್ರವಾಗಬಾರದು. ಅಭ್ಯಂಗನವೆಂದರೆ ಅವನಿಗೆ ಅನಿಷ್ಟ. ಕಾಮಾಲೆಗೆ ಪರಿಹಾರವಾಗಿ ಕೊಡ ಬೇಕಾದ ಘೃತಮಿಶ್ರದ ಔಷಧವನ್ನು ಇಂಥವನಿಗೆ ಕೊಡುವುದಾದರೂ ಹೇಗೆ? ಅರಸನಿಗೆ ಇಷ್ಟವಿಲ್ಲದ್ದನ್ನು ಮಾಡಿದರೆ, ಅವನ ಕೋಪಕ್ಕೆ ಗುರಿ ಯಾಗಬೇಕು. ಅರಸನ ಕೋಪವೆಂದರೆ ಅದು ಅನಿವಾರ್ಯವಾದದ್ದು. ಆದ್ದರಿಂದಲೇ ಪ್ರದ್ಯೋತನಿಗೆ "ಚಂಡಪ್ರದ್ಯೋತ" ಎಂದು ಹೆಸರು ಬಂದಿತ್ತು. ಇಂಥವನ ಬಳಿಗೆ ಹೋಗಲು ಜೀವಕನು ಹಿಂಜರಿದದ್ದು ಸಹಜವಾಗಿಯೇ ಇತ್ತು.

ಪ್ರದ್ಯೋತನ ಕಡೆಯಿಂದ ದೂತರು ಮತ್ತೆ ಮತ್ತೆ ಬಂದರು. ಒಂದೊಂದು ಸಲವೂ ಅವರು ತಂದ ಪಾರಿತೋಷಕ ಹಿಂದಿನದನ್ನು ಹಿಮ್ಮೆಟ್ಟಿಸುತ್ತಿತ್ತು. ಪ್ರದ್ಯೋತನ ಒತ್ತಾಯ ಹೆಚ್ಚಿತು. ಅದರಿಂದ ಬಿಂಬಿಸಾರನ ಒತ್ತಾಯ ಹೆಚ್ಚಿತು. ಅದರಿಂದ ಜೀವಕ ಉಜ್ಜಯಿನಿಗೆ ಹೋಗಲೇಬೇಕಾಯಿತು.

ಉಜ್ಜಯಿನಿಯಲ್ಲಿ ಪ್ರದ್ಯೋತನನ್ನು ಕಂಡಾಗ, ಜೀವಕ ತನ್ನ ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡ: "ಈ ದೊರೆಗೆ ನೇರವಾಗಿ ನಾನು ಔಷಧಿಯನ್ನು ಕೊಟ್ಟರೆ, ಇವನ ಕೋಪ ನನ್ನ ನಾಶಕ್ಕೂ ಕಾರಣವಾಗು ತ್ತದೆ, ಅದರಿಂದ ಇವನೂ ಹಾಳಾಗುತ್ತಾನೆ. ಆದ್ದರಿಂದ ಇವನಿಗೆ ಪತ್ತೆ ಯಾಗದಂತೆ ಅದನ್ನು ಊಡಿಸಬೇಕು."

ಹೀಗೆಂದುಕೊಂಡು, ಜೀವಕನು ಪ್ರದ್ಯೋತನ ಬಳಿ ಹೀಗೆ ಪ್ರಾರ್ಥಿ ಸಿದನು: "ದೊರೆಯೆ, ನಿನ್ನ ಕಾಯಿಲೆಯನ್ನು ನಾನು ಗುಣಪಡಿಸಬಲ್ಲೆ. ಆದರೆ, ವಿಜ್ಞಾಪಿಸಬೇಕಾದದ್ದು ಒಂದು ವಿಷಯವಿದೆ: ಏನೆಂದರೆ, ನಾವು ಈ ಕಾಯಿಲೆಗಳಿಗೆ ಔಷಧ ಮಾಡುವುದಕ್ಕಾಗಿ ಏನೇನು ಪದಾರ್ಥಗಳನ್ನು ಉಪಯೋಗಿಸುವೆವೋ ಅದನ್ನು ಇನ್ನೊಬ್ಬರಿಗೆ ತಿಳಿಸುವಂತಿಲ್ಲ. ಆದ್ದ ರಿಂದ, ಬೇಕಾದುದನ್ನು ನಾವೇ ಹೋಗಿ ಆಯ್ದು ಸಂಗ್ರಹಿಸಿಕೊಂಡು ಬರುವುದು ರೂಢಿ. ಅದಕ್ಕಾಗಿ, ಅರಮನೆಯಿಂದಲೂ ಊರ ಕೋಟೆಯ

ಹೊರಗೂ ನಾನು ಯಾವಾಗ ಎಂದರೆ ಅವಾಗ ಯಾವ ರೀತಿಯ ಅಡ್ಡಿ ಆತಂಕಗಳೂ ಇಲ್ಲದಂತೆ ಹೋಗಿಬರಲು ನನಗೆ ಅಪ್ಪಣೆ ಕೊಡಬೇಕು."

ಜೀವಕನ ಮನಸ್ಸಿನ ಕೌಟಿಲ್ಯವನ್ನು ಅರಿಯದೆ, ಪ್ರದ್ಯೋತನು ಹಾಗೆಯೇ ಆಗಲೆಂದು ಒಪ್ಪಿದನು.

"ಆಗಬಹುದು. ಜೀವಕ. ನೀನು ಯಾವಾಗ ಎಂದರೆ ಅವಾಗ, ಎಲ್ಲಿಗೆ ಎಂದರೆ ಅಲ್ಲಿಗೆ ನಿರಾತಂಕದಿಂದ ಹೋಗಬಹುದು. ನಿನ್ನನ್ನು ಯಾರೂ ತಡೆಯುವುದಿಲ್ಲ. ನೀನು ನಡೆದು ಹೋಗಬೇಕಾದ್ದೂ ಇಲ್ಲ, ನನ್ನ ವಾಹನಗಳನ್ನೇ ನೀನೂ ಉಪಯೋಗಿಸು. ಅವಪರ್ಣಿಕನೆಂಬ ನನ್ನ ದಾಸನು ಎಳೆದುಕೊಂಡು ಹೋಗುವ ರಥವಿದೆ; ಅದು ದಿವಸಕ್ಕೆ ಅರವತ್ತು ಯೋಜನ ಹೋಗಿ, ಅರವತ್ತು ಯೋಜನ ಬರಬಲ್ಲುದು. ಎರಡನೆಯದಾಗಿ, ಭದ್ರವತಿಯೆಂಬ ಭದ್ರಗಜವಿದೆ; ಅದು ದಿವಸಕ್ಕೆ ನೂರು ಯೋಜನ ಹೋಗಿ, ನೂರು ಯೋಜನ ಬರಬಲ್ಲುದು. ಮೂರನೆಯದಾಗಿ, ಮೃದುಕೇಶಿ ಎಂಬ ಹೇಸರಕತ್ತೆಯಿದೆ; ಅದು ದಿವಸಕ್ಕೆ ನೂರಿಪ್ಪತ್ತು ಯೋಜನ ಹೋಗಿ, ನೂರಿಪ್ಪತ್ತು ಯೋಜನ ಬರಬಲ್ಲುದು. ನಾಲ್ಕನೆಯದಾಗಿ, ತೈಲಕರ್ಣಿಕ ಎಂಬ ಕುದುರೆಯಿದೆ; ಅದೂ ಮೃದುಕೇಶಿಯಂತೆಯೇ ನೂರಿಪ್ಪತ್ತುಯೋಜನ ಹೋಗಿ, ಅದೇ ದಿವಸದಲ್ಲಿ ಅಷ್ಟೇ ದೂರ ಬರಬಲ್ಲುದು. ಇವುಗಳಲ್ಲಿ ಯಾವ ವಾಹನವನ್ನಾದರೂ ನೀನು ಉಪಯೋಗಿಸಿಕೊಂಡು ಹೋಗಿಬಾ." ಎಂದನು.

ಜೀವಕನು ಅದರಂತೆಯೇ ಒಮ್ಮೆ ಈ ವಾಹನದಲ್ಲಿ, ಒಮ್ಮೆ ಆ ವಾಹನದಲ್ಲಿ, ಒಮ್ಮೆ ಈ ವೇಳೆಯಲ್ಲಿ, ಒಮ್ಮೆ ಆ ವೇಳೆಯಲ್ಲಿ, ಮನಸ್ಸು ಬಂದ ವಾಹನದಲ್ಲಿ ಇಷ್ಟಬಂದಂತೆ ತಿರುಗಾಡತೊಡಗಿದನು. ಮೊದಲು ಮೊದಲು ಅವನ ಓಡಾಟವನ್ನು ಕಂಡು ಬಾಗಿಲ ಕಾವಲುಗಾರರೂ ಊರಿನ ಜನರೂ ಆಶ್ಚರ್ಯಪಟ್ಟರೂ, ಬರುತ್ತ ಬರುತ್ತ ಅವನ ಓಡಾಟ ನಿತ್ಯ ದಿನಚರಿಯಂತೆ ಸಾಧಾರಣವಾಯಿತು.

ಹೀಗೇ ಇರಲು, ಒಂದು ದಿವಸ, ಜೀವಕನು ಒಂದು ರಾಶಿ ಅದು ಇದು ಬೇರುಗಳನ್ನು ತಂದು ಭಟ್ಟಿಯಿಳಿಸಿ, ಅದನ್ನು ತೈಲದಲ್ಲಿ ಬೇಯಿಸಿ, ಔಷಧವನ್ನು ಪಕ್ವಮಾಡಿದನು.

ಅದನ್ನು ದೊರೆಯ ಕೈಲಿಡುವ ಮೊದಲು "ದೊರೆಯೆ, ಇದು ಬಹು ಸಮರ್ಥವಾದ ಔಷಧ. ಇದನ್ನು ಕೈಗೆ ಹಾಕಿದ ಒಡನೆಯೇ, ಇದನ್ನು ಬಾಯಿಗೆ ಹಾಕಿಕೊಂಡು ನುಂಗಿಬಿಡಬೇಕು. ಗಾಳಿ ಆಡಿದರೆ, ಇದರ ಶಕ್ತಿ ಕುಂದುತ್ತದೆ." ಎಂದನು.

ದೊರೆ ಒಂದು ಕೈಯಿಂದ ಮೂಗನ್ನು ಮುಚ್ಚಿಕೊಂಡು, ಇನ್ನೊಂದು ಕೈಯನ್ನು ಒಡ್ಡಿದನು. ಜೀವಕನು ತನ್ನ ಕೈಗೆ ಹಾಕಿದ ಔಷಧವನ್ನು ದೊರೆಯು ಗುಳಕ್ಕನೆ ನುಂಗಿದನು.

ಆಗ, ಒಂದು ಕ್ಷಣಾರ್ಧದಲ್ಲಿ ಏನೆಲ್ಲ ನಡೆದುಹೋಯಿತು! ಅರಸನಿಗೆ ಮುಂದೆ ಏನು ಕೊಡಬೇಕೆಂಬುದನ್ನು ಪರಿವಾರದವರಿಗೆ ಒಂದೆರಡು ಮಾತಿನಲ್ಲಿ ತಿಳಿಸುತ್ತಾ, ಜೀವಕನು ನೇರವಾಗಿ ಗಜಶಾಲೆಗೆ ಓಡಿ, ಅಲ್ಲಿ ಸಿದ್ಧವಾಗಿ ನಿಂತಿದ್ದ ಭದ್ರವತಿಯನ್ನು ಏರಿಕೊಂಡು, ಒಂದೇ ಉಸಿರಿಗೆ ವಾಯುವೇಗದಿಂದ ಹೊರಟು, ಐವತ್ತು ಯೋಜನಗಳ ಕೊನೆಗೆ ಕೌಶಾಂಬಿ ಯನ್ನು ಮುಟ್ಟಿ, ಅಲ್ಲಿ ತಂಗಿದನು.

ಇತ್ತ, ಪ್ರದ್ಯೋತನು ಜೀವಕನನ್ನು ನಂಬಿ, ಅವನ ಕೈಗೆ ಹಾಕಿದ ಔಷಧಿಯನ್ನು ನೋಡದೆ ನುಂಗಿದನೋ ಇಲ್ಲವೋ, ಆ ಕೂಡಲೆ ತಾನು ತೈಲವನ್ನು ನುಂಗಿದೆನೆಂದು ತಿಳಿದುಹೋಯಿತು. ಅರಸನಿಗೆ ಅಸಾಧ್ಯ ವಾದ ರೋಷ ಉಕ್ಕಿಬಂತು. ಜೀವಕನನ್ನು ಕೂಡಲೆ ಹಿಡಿದು ಶೂಲಕ್ಕೆ ಏರಿಸಬೇಕೆಂದು ರಾಜನ ಆಜ್ಞೆಯಾಯಿತು.

"ಭದ್ರವತೀ ಗಜವನ್ನು ಏರಿಕೊಂಡು ಜೀವಕನು ಪಲಾಯನ ಮಾಡಿದನು." ಎಂದು ಪರಿವಾರದವರು ಬಿನ್ನವಿಸಿದರು.

ದೊರೆ ತನ್ನ ದಾಸನಾದ ಅವಪರ್ಣಿಕನನ್ನು ಕರೆಸಿ ಹೇಳಿದನು: "ಅವಪರ್ಣಿಕ! ಹೋಗು. ಆ ಜೀವಕ ಎಲ್ಲಿದ್ದರೂ ಅವನನ್ನು ಬಿಡದೆ ಕರೆದುಕೊಂಡು ಬಾ. ನಿನಗೆ ಯಥೋಚಿತವಾಗಿ ಬಹುಮಾನಮಾಡು ತ್ತೇನೆ."

ಅರಸನ ಆಜ್ಞೆಯಾದದ್ದೆ ತಡ, ಅವಪರ್ಣಿಕ ಉಜ್ಜಯಿನಿಯನ್ನು ಬಿಟ್ಟದ್ದೆ ತಡ, ಅದೇ ಗಳಿಗೆಯೆ ಅವನು ಕೌಶಾಂಬಿಯಲ್ಲಿ ಕಾಲು ನಿಲ್ಲಿಸಿದ.

"ಅರಸರು ಕರೆತರಹೇಳಿದ್ದಾರೆ. ಬರಬೇಕು" ಎಂದು ಜೀವಕನಿಗೆ ರಾಜಾಜ್ಞೆಯನ್ನು ತಿಳಿಸಿದ.

"ಹೌದು, ಅವಪರ್ಣಿಕ. ಹೇಳದೆ ಬಂದದ್ದು ನನ್ನ ತಪ್ಪು. ಇದೊ, ಈಗ ಬಂದೆ; ಹೋಗೋಣ. ಆದರೆ, ಹೋಗುವ ಮೊದಲು ಊಟ ಮಾಡಿಕೊಂಡು ಹೋಗೋಣ. ನನಗಂತೂ ತುಂಬ ಹಸಿವು. ಬಾ, ನೀನೂ ಊಟಕ್ಕೆ ಕುಳಿತುಕೊ." ಎಂದ, ಜೀವಕ.

ಅವಪರ್ಣಿಕ ಊಟಮಾಡಲು ಒಪ್ಪಲಿಲ್ಲ. "ಹಾಗಾದರೆ, ಈ ಹಣ್ಣನ್ನಾದರೂ ಇಷ್ಟು ತಿನ್ನು, ಆ ಹೊತ್ತಿಗೆ ನಾನು ಊಟ ಮುಗಿಸುತ್ತೇನೆ." ಎಂದು ಜೀವಕನು ಅವನಿಗೆ ಒಂದು ಅರ್ಧ ಹಣ್ಣು ಕೊಟ್ಟ. ಅವಪರ್ಣಿಕ ಅದನ್ನು ಬಾಯಿಗೆ ಹಾಕಿದ.

ಆದರೆ, ಆ ಹಣ್ಣನ್ನು ತನಗೆ ಕೊಡುವ ಮೊದಲು ಜೀವಕ ತನ್ನೊಂದು ಉಗುರಿನ ಕೊನೆಯನ್ನು ಅದರಲ್ಲಿ ಅದ್ದಿದ ಎಂಬುದನ್ನು ಅವಪರ್ಣಿಕ ಗಮನಿಸಲಿಲ್ಲ. ಅಥವಾ, ಗಮನಿಸಿದರೂ ಅದು ಏಕೆಂದು ಅರ್ಥವಾಗಲಿಲ್ಲ. ಆ ಉಗುರಿನ ಕೊನೆಯಲ್ಲಿ ಅದೇನಿದ್ದಿತೋ ಏನೋ, ಅಂತೂ ಅವಪರ್ಣಿಕ ಆ ಹಣ್ಣನ್ನು ಅಗಿದು, ಅದರ ರಸವನ್ನು ಒಂದು ಗುಟುಕು ನುಂಗಿದನೋ ಇಲ್ಲವೋ, 'ಏಕೋ ತಲೆ ಭಾರ!' ಎಂದು ಕೊಳ್ಳುತ್ತ ಹಾಗೇ ಅಡ್ಡವಾಗಿ ಮಗಲಿದ.

ಜೀವಕ ಅವಸರವಿಲ್ಲದೆ ನಿದಾನದಿಂದ ತನ್ನ ಊಟವನ್ನು ಮುಗಿಸಿ, ಎದ್ದು, ಕೈ ತೊಳೆದುಕೊಂಡು, ಅನಂತರ ಬಂದು ಅವಪರ್ಣಿಕನನ್ನು ಅಲುಗಿಸಿ ಎಬ್ಬಿಸಿ, "ಉಜ್ಜಯಿನಿಗೆ ಹೋಗೋಣವೆ?" ಎಂದ.

ಅವಪರ್ಣಿಕ ಕಣ್ಣು ತೆರೆದು, ಜೀವಕನ ಕಾಲು ಹಿಡಿದುಕೊಂಡು, "ನಿನ್ನ ಧರ್ಮ! ಉಜ್ಜಯಿನಿಗಾದರೂ ಬರುತ್ತೇನೆ, ನೀನು ಎಲ್ಲಿಗೆ ಹೇಳಿದರೆ ಅಲ್ಲಿಗೂ ಬರುತ್ತೇನೆ. ದಯೆಮಾಡಿ, ಈ ತಲೆಯ ಭಾರವನ್ನು ಹೋಗಲಾಡಿಸು." ಎಂದು ಬೇಡಿಕೊಂಡನು.

ಜೀವಕನು ಮೃದುವಾಗಿ ನಗುತ್ತ, "ಹೆದರಬೇಡ, ಅವಪರ್ಣಿಕ ಆ ಉಳಿದಿರುವ ಹಣ್ಣನ್ನು ತಿಂದು ಮುಗಿಸು. ತಲೆಯ ಭಾರವೆಲ್ಲ ಇಳಿದು ಹೋಗುತ್ತದೆ." ಎಂದನು.

ಅದಕ್ಕೆ ಅವಪರ್ಣಿಕನು "ಈಗ ಇದರ ರಸ ಒಂದು ಗುಟುಕು ನುಂಗಿಯೇ ಈ ಗತಿಗೆ ಬಂದೆ. ಇನ್ನು ಇಡಿಯ ಹಣ್ಣನ್ನು ತಿಂದರೆ, ನನ್ನ ಕತೆ ಮುಗಿದಹಾಗೆಯೇ!" ಎಂದು ಮತ್ತೆ ಕಾಲು ಕಟ್ಟಿಕೊಂಡ.

"ಕೇಳು, ಅವಪರ್ಣಿಕ : ಇದುವರೆಗೆ ನಾನು ಪ್ರಮಾದದಿಂದಲಾದರೂ ಯಾವ ಪ್ರಾಣಿಗೂ ಜೀವಹಾನಿ ಮಾಡಿದ್ದಿಲ್ಲ. ಹೀಗೆ ಇಷ್ಟು ಹೊಟ್ಟೆಗೆ ಯಾರಿಗಾದರೂ ವೈಪರೀತ್ಯ ಉಂಟುಮಾಡಿರುವುದು ಇದೇ ಮೊದಲು. ಹೆದರಬೇಡ, ತಿನ್ನು, ಸ್ವಸ್ಥನಾಗುವೆ." ಎಂದು ಹೇಳಲಾಗಿ, ಅವಪರ್ಣಿಕನು ಉಳಿದ ಹಣ್ಣನ್ನು ತಿಂದನು. ಅವನ ತಲೆಯ ಭಾರ ಮಾಯವಾಯಿತು. ಕನಸಿನಿಂದ ಎಚ್ಚತ್ತವನ ಹಾಗೆ ಎದ್ದುನಿಂತನು.

ಜೀವಕನು ಭದ್ರವತಿಯನ್ನು ಅವಪರ್ಣಿಕನ ಕೈಗೆ ಒಪ್ಪಿಸಿ, "ಇದೋ, ಇದನ್ನು ಕರೆದುಕೊಂಡು, ನೀನು ಉಜ್ಜಯಿನಿಗೆ ಹೋಗು. ನೀನು ಹೋಗುವ ವೇಳೆಗೆ ಅರಸನ ಕಾಮಾಲೆ ಗುಣವಾಗಿರುತ್ತದೆ, ಅವನ ಕೋಪವೂ ಶಾಂತವಾಗಿರುತ್ತದೆ. ನಾನು ಮಾಡಿದ ಕಾರ್ಯ ಈ ವೇಳೆಗೆ ಅರಸನಿಗೆ ಅರ್ಥವಾಗಿರುತ್ತದೆ." ಎಂದು ಅವನನ್ನು ಕಳುಹಿಸಿ, ತಾನು ರಾಜಗೃಹಕ್ಕೆ ಹೋದನು. ಅಲ್ಲಿಗೆ ಹೋದ ಮೇಲೆ, ನಡೆದದ್ದನ್ನೆಲ್ಲಾ ಕುರಿತು ಬಿಂಬಿಸಾರನಿಗೆ ನಿವೇದನಮಾಡಿದನು.

— ೮ —

ಈ ವೇಳೆಗೆ ಭಗವಂತನು ಧರ್ಮಚಕ್ರಪ್ರವರ್ತನಮಾಡತೊಡಗಿ ಇಪ್ಪತ್ತು ವರುಷಗಳಾಗಿತ್ತು.

ಆಗ ಭಗವಂತನಿಗೆ ಒಂದು ಸಲ ದೇಹಾಲಸ್ಯವಾಯಿತು. ಬಿಂಬಿಸಾರನು ಭಗವಂತನ ಕೈಂಕರ್ಯಕ್ಕೆ ಜೀವಕನನ್ನು ನೇಮಿಸಿದನು. ಭಗವಂತನಿಗೆ ವಿರೇಚಕವಾಗುವಂಥ ಔಷಧವನ್ನು ಕೊಡಬೇಕೆಂದು ಜೀವಕನು ಕಂಡನು. ಜಾಡ್ಯದ ಕಾರಣವನ್ನು ಪರಿಶೀಲಿಸಿ, ಅದು ಮೂರು ತೆರನಾದುದೆಂದು ಕಂಡುಕೊಂಡನು. ಅದಕ್ಕಾಗಿ ಮೂರು ಕಮಲ ಪುಷ್ಪಗಳನ್ನು ಸಿದ್ಧಮಾಡಿ, ಒಂದೊಂದರಲ್ಲಿ ಇಷ್ಟಿಷ್ಟು ಔಷಧವನ್ನು ಇರಿಸಿದನು. ಮೂರು ಬೇರೆ ಬೇರೆ ಕಾಲಗಳಲ್ಲಿ ಆ ಪುಷ್ಪಗಳನ್ನು ಮೂಸಿನೋಡುವಂತೆ

ಹೇಳಿ, ಅವುಗಳನ್ನು ಭಗವಂತನಿಗೆ ಒಪ್ಪಿಸಿದನು. ಒಂದೊಂದು ಪುಷ್ಪದ ವಾಸನೆಯಿಂದಲೂ ಜಾಡ್ಯದ ಒಂದೊಂದು ಕಾರಣ ಕರಗಿಹೋಯಿತು. ಭಗವಂತನು ಜಾಡ್ಯವಿಲ್ಲದವನಾದನು.

ಆಗ, ಭಗವಂತನ ಪಥ್ಯಕ್ಕಾಗಿ ರಾಜಗೃಹದ ಸುತ್ತುಮುತ್ತಿನ ಭಕ್ತರೆಲ್ಲ ತಮ್ಮ ತಮ್ಮ ಕೈಲಾದ ಯುಕ್ತಾಹಾರಗಳನ್ನು ಪಕ್ವಮಾಡಿಕೊಂಡು ತಂದರು. ಆದರೆ, ಭಗವಂತನ ಸದ್ಯದ ಜೀರ್ಣಶಕ್ತಿಗೆ ಅನುಗುಣವಾಗುವಂತಹ ಕೋಮಲಾಹಾರ ಎಲ್ಲಿ ದೊರಕಬಹುದೆಂಬುದನ್ನು ಮಹಾಮೌದ್ಗಲ್ಯಾಯನನು ತನ್ನ ದಿವ್ಯದೃಷ್ಟಿಯಿಂದ ಕಂಡುಕೊಂಡನು.

ಚಂಪಾನಗರದಲ್ಲಿ ಸೋಣ ಎಂಬವನು ಒಬ್ಬ ಸುಕುಮಾರ. ಅವನ ತಾಯಿ ತಂದೆ ತುಂಬ ಧನಾಢ್ಯರು. ಆ ನಗರವೊಂದರಲ್ಲೇ ಅವರಿಗೆ ಸಾವಿರಾರು ಮನೆ. ಅವರು ಆ ಹುಡುಗನನ್ನು ಚಿಕ್ಕಂದಿನಿಂದ ಬಹು ಕೋಮಲವಾಗಿಯೇ ಬೆಳೆಸಿದ್ದರು.

ಆ ಮಗು ಹುಟ್ಟಿದಾಗಲೇ, ಅದರ ಎರಡೂ ಅಂಗಾಲುಗಳ ಮೇಲೆ, ಬಲಗಡೆಯಿಂದ ಪ್ರದಕ್ಷಿಣವಾಗಿ ಸುತ್ತಿಬಂದ ಕೆಲವು ಕೆಂಪು ಕೂದಲುಗಳು ಕಮಲಪುಷ್ಪದ ಆಕಾರದಲ್ಲಿ ಬೆಳೆದಿದ್ದುವು. ಆ ಸುಂದರವಾದ ಸಹಜಚಿಹ್ನೆಯನ್ನು ಒಂದು ಮಹಾಪುರುಷನ ಚಿಹ್ನೆಯೆಂದು ತಿಳಿದು, ಅವನ ತಾಯಿ ತಂದೆ, ಅವನಿಗೆ ನೆಲದ ಮೇಲೆ ಕಾಲೂರಲು ಅವಕಾಶ ಕೊಡುತ್ತಿರಲಿಲ್ಲ. ಅವನು ಎಲ್ಲಿಹೋಗಬೇಕಾದರೂ ವಾಹನದ ಮೇಲೆಯೇ. ಅವನ ಸೇವೆಗೆ ಸಾವಿರಾರು ಪರಿಚಾರಕರು. ಅವನ ಅಂಗಾಲಿನ ಆ ಅದ್ಭುತಲಕ್ಷಣವನ್ನು ದರ್ಶನಮಾಡಿಕೊಂಡು ಹೋಗುವುದಕ್ಕೆ ದೂರ ದೇಶಗಳಿಂದ ಜನ ತಂಡೋಪತಂಡವಾಗಿ ಬಂದು ಹೋಗುವರು.

ಸಾಧಾರಣವಾಗಿ, ಇತರ ಧನಾಢ್ಯರ ಮನೆಗಳಲ್ಲಿ ದಾಸರನ್ನೂ ಪರಿಚಾರಕರನ್ನೂ ಹೊಡೆದು ಬಡಿದು, ಅವರಿಂದ ಸೇವೆ ಕೊಳ್ಳುವುದುಂಟು. ಆದರೆ, ಸೋಣನ ಮನೆಯಲ್ಲಿ ಮಾತ್ರ, ಯಾವ ರೀತಿಯ ಹೊಡೆತ ಬಡಿತಗಳೂ ಇಲ್ಲದೆ ಸೇವಕರು ತಮ್ಮ ಕೆಲಸ ತಾವು ಮಾಡುತ್ತಿದ್ದರು. ಅಪ್ಪಿ ತಪ್ಪಿ ಸೇವಕರು ಯಾರಾದರೂ ಎಂದಾದರೂ ಅವಿಧೇಯರಾದರೆ,

'ನಾನು ನೆಲದ ಮೇಲೆ ಕಾಲೂರಿ ನಡೆದುಬಿಡುತ್ತೇನೆ!' ಎಂದು ಸೋಣನು ಹೆದರಿಸುತ್ತಿದ್ದನು. ಈ ಮಾತಿನ ಹೆದರಿಕೆಯೇ ಮಹಾದಂಡವಾದಂತೆ ಆಗಿ, ಎಲ್ಲರೂ ವಿಧೇಯರಾಗಿ ನಡೆದುಕೊಳ್ಳುತ್ತಿದ್ದರು.

ಇಷ್ಟು ಕೋಮಲವಾಗಿ, ನೆಲದ ಮೇಲೆ ಕಾಲೇ ಸೋಕದ ಹಾಗೆ, ಬೆಳೆದ ಹುಡುಗನಿಗೆ ಆಹಾರಕ್ಕಾಗಿ ಅವರು ಭತ್ತವನ್ನು ಬೆಳೆಸುತ್ತಿದ್ದುದೂ ಆಶ್ಚರ್ಯಕರವಾಗಿತ್ತು. ಆ ಭತ್ತ ಬೆಳೆಯುವ ಗದ್ದೆಗೆ ಚಂದನ, ಕರ್ಪೂರ ಮುಂತಾದ ಪರಿಮಳದ್ರವ್ಯಗಳನ್ನು ಅರೆದು ಕದಡಿದ ನೀರನ್ನು ಹಾಯಿಸುತ್ತಿದ್ದರು. ಅದರಿಂದ ಆ ಭೂಮಿಗೆ, ಆ ಬೀಜದ ಬಿತ್ತಕ್ಕೆ, ಆ ಬೇಸಾಯಗಾರರಿಗೆ ಕೂಡ ಅದರದೇ ಪರಿಮಳ ವ್ಯಾಪಿಸುತ್ತಿತ್ತು. ಮತ್ತೆ, ಭತ್ತ ಕುಯಿಲಿಗೆ ಬಂದಾಗ, ಅದನ್ನು ಕಬ್ಬಿಣದ ಕುಡುಗೋಲಿನಿಂದ ಕತ್ತರಿಸದೆ, ಕೈಯ ಉಗುರಿನಿಂದ ಚಿವುಟಿ ತೆಗೆಯುವರು. ಭತ್ತದ ಕಣಜ ಗಂಧದ ಮರದಿಂದ ಆದದ್ದು. ಅದರೊಳಗೆ ಒಂದು ಮುಷ್ಟಿ ಎತ್ತರ ಪರಿಮಳದ್ರವ್ಯಗಳನ್ನು ಹರಡಿ, ಅದರ ಮೇಲೆ ಒಂದು ಮುಷ್ಟಿ ಎತ್ತರ ಗಂಧಶಾಲಿಯನ್ನು ತುಂಬಿ, ಹೀಗೆ ಪದರಪದರವಾಗಿ ಸುಗಂಧ ಶಾಲಿಯನ್ನು ಶೇಖರಿಸಿಡುವರು. ಮೂರು ವರುಷಗಳ ವರೆಗೆ ಆ ಕಣಜದ ಗೋಜಿಗೆ ಹೋಗುತ್ತಿರಲಿಲ್ಲ. ಮೂರು ವರುಷದ ಮೇಲೆ, ಆ ಕಣಜದ ಬಾಗಿಲು ತೆರೆದಾಗ, ಅಲ್ಲಿಂದ ಹೊರಟ ಸುಗಂಧವು ಸಮಸ್ತ ಚಂಪಾ ನಗರಕ್ಕೂ ವ್ಯಾಪಿಸುವುದು. ಪ್ರತಿ ದಿವಸ ಮನೆಯ ವೆಚ್ಚಕ್ಕೆ ಎಷ್ಟು ಬೇಕೋ ಅಷ್ಟು ಭತ್ತವನ್ನು ತೆಗೆದುಕೊಳ್ಳುವರು. ಅದನ್ನು ಚಂದನದ ಕುಂದಾಣದಲ್ಲಿ ಕುಟ್ಟುವರು. ಕೇರಿದ ಮೇಲೆ, ಅಕ್ಕಿಯ ಕಾಳು ಮುತ್ತಿನಂತಿರುವುದು. ಆ ಭತ್ತದ ಹೊಟ್ಟನ್ನು ಚೆನ್ನಾಗಿ ನಯವಾಗಿ ಪುಡಿ ಮಾಡಿ, ಅದನ್ನು ಸ್ನಾನಚೂರ್ಣವಾಗಿ ಬಳಸುವರು. ಏಳೆಂಟು ವಿಧವಾಗಿ ಶುದ್ಧಿಮಾಡಿದ ಪಾತ್ರೆಗಳಲ್ಲಿ ಆ ಅಕ್ಕಿಯನ್ನು ಬೇಯಿಸುವರು. ಬೇಯಿಸುವ ಒಲೆಯಲ್ಲಿ ಸುಗಂಧದ ಕಟ್ಟಿಗೆಯನ್ನು ಉರಿಸುವರು.

ಇಂಥ ಅಕ್ಕಿಯ ಪಕ್ವವಾದ ಅನ್ನವನ್ನೇ ಸೋಣ ತಿನ್ನುತ್ತಿದ್ದುದು. ಅದನ್ನೇ ಭಗವಂತನಿಗೆ ತರಬೇಕೆಂದು ಮೌದ್ಗಲ್ಯಾಯನನು ಉದ್ದೇಶ ಮಾಡಿ ಬಂದದ್ದು.

ಮೌದ್ಗಲ್ಯಾಯನನು ತನ್ನ ಯೋಗಶಕ್ತಿಯಿಂದ ವಾಯುಮಾರ್ಗವಾಗಿ ರಾಜಗೃಹದಿಂದ ಚಂಪಾನಗರಕ್ಕೆ ಬಂದು, ಸೋಣನ ಮನೆಯ ಬಾಗಿಲಲ್ಲಿ ಭಿಕ್ಷಾಪಾತ್ರೆಯನ್ನು ಹಿಡಿದು ನಿಂತನು. ಬಿಳಿಯ ಮೋಡದಿಂದ ಆವೃತವಾದ ನೀಲಿಯ ಪರ್ವತದಂತೆ ನಿಂತಿದ್ದ ಆ ಭಿಕ್ಷುವನ್ನು ಕಂಡು, ಸೋಣನು ಅವನ ಪಾತ್ರೆಯನ್ನು ಕೋಮಲಾಹಾರದಿಂದ ತುಂಬಿದನು. ಭಗವಂತನಿಗಾಗಿ ಅವನು ಆ ಭಿಕ್ಷೆಯನ್ನು ಸ್ವೀಕರಿಸಿದನೆಂಬುದನ್ನು ಕೇಳಿ, ಸೋಣನು ಹೇಳಿದನು: "ಆರ್ಯನು ಈ ಭಿಕ್ಷೆಯನ್ನು ತಾನು ಭುಂಜಿಸಲಿ. ಭಗವಂತನಿಗಾಗಿ ಪ್ರತ್ಯೇಕವಾದ ಭಿಕ್ಷೆಯನ್ನು ನಾನು ನೀಡುತ್ತೇನೆ."

ಮೌದ್ಗಲ್ಯಾಯನನು ತಾನು ಭೋಜನವನ್ನು ಮುಗಿಸಿ, ಭಗವಂತನಿಗೆ ಭಿಕ್ಷೆಯನ್ನು ಕೊಂಡು, ಮತ್ತೆ ವಾಯುಮಾರ್ಗವಾಗಿ ರಾಜಗೃಹಕ್ಕೆ ಬಂದನು.

ಸೋಣನ ಮನೆಯ ಕೋಮಲಾಹಾರವನ್ನು ಮಹಾಮೌದ್ಗಲ್ಯಾಯನನು ತರುವ ಆ ಹೊತ್ತಿಗೆ ಸರಿಯಾಗಿ, ಬಿಂಬಿಸಾರನು ತಾನೂ ಮೃದುವಾದ ಪಕ್ವಾಹಾರವನ್ನು ಭಗವಂತನಿಗಾಗಿ ಮಾಡಿಸಿಕೊಂಡು ತಂದಿದ್ದನು. ಸೋಣನ ಮನೆಯ ಅನ್ನವನ್ನು ಕಂಡು, ದೊರೆ ಕೇಳಿದನು: "ಏನು ಭಗವನ್? ಇದು ದೇವತೆಗಳ ಆಹಾರದಂತಿದೆ?" ಭಗವಂತನು ಹೇಳಿದನು: "ಇದು ನಿನ್ನದೇ ಚಂಪಾನಗರದಲ್ಲಿ ವಾಸಿಸುತ್ತಿರುವ ಪುಣ್ಯವಂತನಾದ ಸೋಣನ ಮನೆಯ ಅನ್ನ, ಮಹಾರಾಜ."

ಭಗವಂತನು ಕೊಟ್ಟ ಒಂದು ತುತ್ತು ಆ ಅನ್ನವನ್ನು ಬಿಂಬಿಸಾರನು ರುಚಿ ನೋಡಿದನು. ಮುಂದೆ ಒಂದು ಸಲ ತಾನೇ ಹೋಗಿ ಪುಣ್ಯವಂತನಾದ ಆ ಸೋಣನನ್ನು ಸಂದರ್ಶನಮಾಡಿಕೊಂಡು ಬಂದನು. ತನ್ನ ಮನೆಗೆ ಬಂದ ದೊರೆಯನ್ನು ಅವನ ಮನೆಯಲ್ಲಿ ತಾನು ಹೋಗಿ ಕಾಣುವುದು ಮರ್ಯಾದೆಯೆಂದು ಸೋಣನು ರಾಜಗೃಹಕ್ಕೆ ಬಂದ ಸಂದರ್ಭದಲ್ಲಿ, ಅವನಿಗೆ ಭಗವಂತನ ಸಂದರ್ಶನವಾಯಿತು. ಅಂದಿನಿಂದ ಅವನು ಸಂಸಾರದ ಕಡೆಗೆ ಬೆನ್ನು ತಿರುಗಿಸಿ, ತಾನೂ ಬುದ್ಧನ ಭಿಕ್ಷುಸಂಘದಲ್ಲಿ ಒಬ್ಬನಾಗಿ ಸೇರಿದನು.

— ೯ —

ಸೋಣನ ಮನೆಯಿಂದ ಮೌದ್ಗಲ್ಯಾಯನನು ಭಗವಂತನ ಪಥ್ಯಕ್ಕಾಗಿ ಆ ಅನ್ನವನ್ನು ತಂದನಲ್ಲಾ, ಅದೇ ದಿವಸ ಜೀವಕನು ಭಗವಂತನಿಗೆ ಒಂದು ಅಮೂಲ್ಯವಾದ ದೇವಾಂಗವಸ್ತ್ರವನ್ನು ದಾನಮಾಡಿದನು.

ಆ ವಸ್ತ್ರದ ಕತೆ ಹೀಗೆ: ಅದು ಉತ್ತರಕುರುವಿನ ಕಾಡುಗಳಲ್ಲಿ ಕಲ್ಪವೃಕ್ಷದ ಮೇಲೆ ಬೆಳೆದ ವಸ್ತ್ರ. ಯುಗಂಧರ ಪರ್ವತಕ್ಕೆ ಹೋಗಿ ಬರುತ್ತಿದ್ದ ಯಾವುದೋ ಮಹಾಪಕ್ಷಿಗಳು ಆ ವಸ್ತ್ರವೊಂದನ್ನು ಕಿತ್ತು ತಂದು, ಹಿಮಾಲಯದ ಕಾಡಿನಲ್ಲಿ ಎಸೆದು ಹೋದುವು. ವನಚರರು ಯಾರೋ ಅದನ್ನು ಕಂಡು, ತಮ್ಮ ಅರಸನಾದ ಚಂಡಪ್ರದ್ಯೋತನಿಗೆ ಅದನ್ನು ತಂದು ಒಪ್ಪಿಸಿದರು. ಪ್ರದ್ಯೋತನು ತನಗೆ ಉಪಕಾರಮಾಡಿದ ಜೀವಕನನ್ನು ಕೃತಜ್ಞತೆಯಿಂದ ಸ್ಮರಿಸಿ, ಆ ವಸ್ತ್ರವನ್ನು ಅವನಿಗೆ ಕಳಿಸಿಕೊಟ್ಟನು. ಅದನ್ನು ಜೀವಕನು ಭಗವಂತನಿಗೆ ಅರ್ಪಿಸಿದನು.

ಆ ವಸ್ತ್ರವನ್ನು ಕುರಿತು ಭಗವಂತನು ಆನಂದನಿಗೆ ಹೇಳಿದನು: "ಆನಂದ! ಭಿಕ್ಷುಗಳ ಬಳಿ ಇಂಥ ದಿವ್ಯವಸ್ತ್ರವಿದ್ದರೆ, ಕಳ್ಳಕಾಕರ ಭೀತಿಯುಂಟು. ಏನು ಮಾಡೋಣ?"

ಆನಂದನು ಆ ಒಂದು ವಸ್ತ್ರವನ್ನು ಮೂವತ್ತು ಚೂರುಗಳಾಗಿ ಹರಿದನು. ಆ ಚೂರುಗಳನ್ನು ಮತ್ತೆ ಜೋಡಿಸಿ ಮೂರು ವಸ್ತ್ರವಾಗುವಂತೆ ಹೊಲಿದನು. ಹೊಲಿದ ವಸ್ತ್ರವು ಬದುವುಗಳನ್ನು ಕಟ್ಟಿದ ಭತ್ತದ ಗದ್ದೆಯಿದ್ದ ಹಾಗಿತ್ತು. ಆನಂದನ ಬುದ್ಧಿಚಮತ್ಕಾರವನ್ನು ಭಗವಂತನು ಮೆಚ್ಚಿಕೊಂಡನು. ಅಂದಿನಿಂದ, ಭಿಕ್ಷುಗಳು ಹೀಗೆಯೇ ಚೂರು ವಸ್ತ್ರಗಳನ್ನು ಹೊಲಿದು ಮಾಡಿದ ಮೂರು ವಸ್ತ್ರಗಳನ್ನು ಬಳಸತಕ್ಕುದೆಂದು ಸಂಘದಲ್ಲಿ ನಿಯಮವಾಯಿತು.

ಆ ದಿವಸ, ಭಗವಂತನು ಸಭೆಯಲ್ಲಿ ಮಾಡಿದ ಧರ್ಮಬೋಧೆಯನ್ನು ಕಿವಿಗೊಟ್ಟು ಕೇಳಿ, ಜೀವಕನು ಬುದ್ಧನಿಗೂ ಧರ್ಮಕ್ಕೂ ಸಂಘಕ್ಕೂ ಶರಣಾದನು. ಭಗವಂತನನ್ನು ಪ್ರತಿದಿನವೂ ಮೂರು ಬಾರಿ ಸಂದರ್ಶನ ಮಾಡಬೇಕೆಂದು ಅವನಿಗೆ ಬಯಕೆ ಮೂಡಿತು.

ಆದರೆ, ಮೂರು ಸಲ ಹೋಗಿ ಮೂರು ಸಲ ಬರುವುದಕ್ಕೆ ಬಿಂಬಿಸಾರನು ಕೊಟ್ಟ, ಊರ ಹೊರಗಿನ ವೇಣುವನ ವಿಹಾರವು ತುಂಬಾ ದೂರವಾಗುತ್ತದೆಂದು ಜೀವಕನು, ಊರ ಒಳಗಿನ ತನ್ನ ಆಮ್ರವನದಲ್ಲಿಯೇ ಹೊಸ ವಿಹಾರವನ್ನು ನಿರ್ಮಾಣ- ಮಾಡಿಸಿ, ಸಂಘದ ಹೆಸರಿನಲ್ಲಿ ಅದನ್ನು ಭಗವಂತನಿಗೆ ದಾನಮಾಡಿದನು.

ರಾಜಗೃಹದಲ್ಲಿ ತಂಗಿದಾಗ, ಭಗವಂತನು ಒಮ್ಮೆ ವೇಣುವನ ವಿಹಾರದಲ್ಲಿ ಇರುವನು, ಒಮ್ಮೆ ಜೀವಕನ ಆಮ್ರವನದಲ್ಲಿ ಇರುವನು.

# ಇನ್ನೆರಡು ಪ್ರಶ್ನೆ

"ಆಯಿತು. ಇನ್ನೊಂದೆರಡು ಪ್ರಶ್ನೆ ಕೇಳಬಹುದೊ?"

"ಒಂದೆರಡು ಏಕೆ? ಒಂದು ಹತ್ತು ಬೇಕಾದರೂ ಕೇಳಿ. ತಿಳಿದಿದ್ದರೆ ಹೇಳುತ್ತೇನೆ. ಇಲ್ಲದಿದ್ದರೆ, ತಾರತಮ್ಯ ಇದ್ದೇ ಇದೆ."

"ಅದೇ—ಆ ವಿಶಾಖೆಯ ಹಾಗೆ ಮಹಾಲತಾಪ್ರಸಾಧನವನ್ನು ಧರಿಸಬಲ್ಲವಳು ಬಂಧುಲನ ಹೆಂಡತಿ ಮಲ್ಲಿಕಾ ಎಂದೆಯಲ್ಲ, ಅವಳ ಕತೆ, ಒಂದು; ಮತ್ತೆ, ಬಿಂಬಿಸಾರನ ತಂಗಿಯ ಗಂಡ ಪ್ರಸೇನಜಿತ್ ಎಂದೆಯಲ್ಲ, ಅವನ ಕತೆ, ಎರಡು; ಇನ್ನು, ವಿಡೂಡಭ ಎಂದೋ ಏನೋ ವಿಚಿತ್ರವಾದ ಹೆಸರು ಹೇಳಿದೆಯಲ್ಲ, ಅವನ ಕತೆ, ಅದೊಂದು ಮೂರು;........"

"ಓಹೋ! ಇದೇನೋ ನಿಮ್ಮ ಒಂದೆರಡು ಪ್ರಶ್ನೆ?"

"ಆ್ಞ! ಸದ್ಯಕ್ಕೆ ಇಷ್ಟು ಸಾಕು."

— ೧ —

ಪ್ರಸೇನಜಿತ್ ಕೋಸಲರಾಜನ ಮಗ. ಬಂಧುಲನು ಕುಶಿನಾರಾ ನಗರದ ಕ್ಷತ್ರಿಯಕುಮಾರ. ಇವರಿಬ್ಬರೂ ತಕ್ಷಶಿಲಾನಗರದಲ್ಲಿ ಒಟ್ಟಿಗೆ ವಿದ್ಯಾಭ್ಯಾಸ ಮಾಡುತ್ತಿದ್ದಾಗ, ಲಿಚ್ಛವಿಗಳ ಸಂತಾನದ ಮಹಾಲಿಯೆಂಬ ಕ್ಷತ್ರಿಯಪುತ್ರನೂ ಅವರ ಜೊತೆಗೇ ಓದುತ್ತಿದ್ದ. ಒಂದೇ ಗುರುವಿನ ಕಾಲ ಬಳಿ ಕುಳಿತು ಕಲಿತ ಆ ಮೂವರಿಗೂ ಚೆನ್ನಾಗಿ ಪರಿಚಯವಾಯಿತು, ಗಾಢವಾದ ಸ್ನೇಹ ಬೆಳೆಯಿತು. ವಿದ್ಯೆ ಕಲಿತದ್ದು ಮುಗಿದ ಮೇಲೆ ಮೂವರೂ ತಮ್ಮ ತಮ್ಮ ಊರುಗಳಿಗೆ ಹೋದರು.

ಪ್ರಸೇನಜಿತನ ತಂದೆಯು, ಮಗನು ಕಲಿತು ಬಂದ ವಿದ್ಯೆಯ ಪಾರಂಗಮತೆಯನ್ನು ಕಂಡು ಸಂತುಷ್ಟನಾಗಿ, ಅವನಿಗೆ ರಾಜ್ಯದಲ್ಲಿ ಅಭಿಷೇಕಮಾಡಿದನು.

ಕ್ಷತ್ರಿಯಪುತ್ರನಾದ ಮಹಾಲಿಯು ತನ್ನ ಊರಾದ ವೈಶಾಲಿಗೆ ಹಿಂದಿರುಗಿದ ಮೇಲೆ, ತಾನು ಕಲಿತು ಬಂದದ್ದನ್ನು ಅಲ್ಲಿನ ಲಿಚ್ಛವಿಗಳಿಗೆ ಕಲಿಸುತ್ತಾ ಅಲ್ಲಿಯೇ ನಿಂತನು. ಆದರೆ ಮಿತಿಮೀರಿ ಕೆಲಸ ಮಾಡಿದ್ದರ ಫಲವಾಗಿ ದೃಷ್ಟಿಪಾಟವವನ್ನು ಕಳೆದುಕೊಂಡನು. ಆಗ ಲಿಚ್ಛವಿಗಳು "ಈ ನಮ್ಮ ಆಚಾರ್ಯನು ನಮಗೆ ಪಾಠ ಹೇಳಿಕೊಟ್ಟು ಕಣ್ಣುಗಳನು ಕಳೆದುಕೊಂಡಿದ್ದಾನೆ. ಈಗ ಇವನನ್ನು ಕೈಬಿಡುವುದು ನಮಗೆ ತಕ್ಕುದ್ದಲ್ಲ." ಎಂದುಕೊಂಡು, ವೈಶಾಲೀನಗರದ ಮಹಾದ್ವಾರದ ಹತ್ತಿರ, ಅವನಿಗೆ ವಾಸಸ್ಥಾನವನ್ನು ಮಾಡಿಕೊಟ್ಟು, ಅವನ ಬದುಕಿಗಾಗಿ ನೂರು ಸಾವಿರ ಹೊನ್ನನ್ನು ದಾನಮಾಡಿದರು. ಹೀಗೆ ಮಹಾಲಿಯು ವೈಶಾಲಿಯಲ್ಲಿ ಲಿಚ್ಛವಿಗಳಿಗೆ ಬೋಧೆಮಾಡುತ್ತ, ನಗರದ ಮಹಾದ್ವಾರದ ಬಳಿ ವಾಸಿಸುತ್ತಿದ್ದನು.

ಇತ್ತ, ಬಂಧುಲ ಕುಮಾರನು ತಕ್ಷಶಿಲೆಯಲ್ಲಿ ವಿದ್ಯೆ ಕಲಿತು ಬಂದನೆಂಬುದನ್ನು ಕುಶಿನಾರಾದ ಮಲ್ಲರು ಕೇಳಿ, ಅವನ ವಿದ್ಯೆಯನ್ನು ಪರೀಕ್ಷಿಸಬೇಕೆಂದು ಬಯಸಿದರು. ಬಲಿತ ಬಿದಿರುಗಳನ್ನು ಕಂತೆಕಂತೆಯಾಗಿ ಕಟ್ಟಿ, ಅರುವತ್ತರ ಒಂದೊಂದು ಕಂತೆಯನ್ನು ಒಂದೇ ಏಟಿಗೆ ಕತ್ತಿಯಿಂದ ಕತ್ತರಿಸಬೇಕೆಂದು ಕೋರಿದರು.

ಅರುವತ್ತು ಬಿದಿರುಗಳನ್ನು ಒಂದು ಕಂತೆ ಮಾಡಿದರು. ಅದನ್ನು ಮೇಲಿನಿಂದ ಒಂದು ಹಗ್ಗದ ತುದಿಗೆ ನೇತುಹಾಕಿದರು. "ಒಂದೇ ಏಟಿಗೆ ಇದನ್ನು ಕತ್ತರಿಸು, ನೋಡೋಣ." ಎಂದರು.

ಬಂಧುಲನು ಕತ್ತಿಯನ್ನು ತೂಗಿ ಬೀಸಿದನು. ಅರುವತ್ತು ಬಿದಿರೂ ಒಂದೇ ಏಟಿಗೆ ಕತ್ತರಿಸಿಹೋಯಿತು. ಆದರೆ ಕತ್ತರಿಸುವಾಗ ಏನೋ ಲೋಹದಂತೆ ಖಣಿಲೆಂದು ಸದ್ದಾಯಿತು.

"ಏನದು ಸದ್ದು?" ಎಂದು ಕೇಳಿದ, ಬಂಧುಲ.

"ಅದೇ? ಒಂದೊಂದು ಬಿದಿರಿನ ಒಳಗೂ ಒಂದೊಂದು ಕಬ್ಬಿಣದ ಸಲಾಕೆಯನ್ನು ಅಡಗಿಸಿದ್ದೆವು, ನಿನ್ನ ಸಾಮರ್ಥ್ಯವನ್ನು ಪರೀಕ್ಷೆಮಾಡುವುದಕ್ಕೆ!" ಎಂದರು ಆ ಮಲ್ಲರು, ನಗುತ್ತಾ.

ಬಂಧುಲನ ಕಣ್ಣಲ್ಲಿ ನೀರು ತುಂಬಿತು. "ಇಷ್ಟು ಜನ ನನ್ನ ಬಂಧುಗಳು ಇದ್ದೀರಿ, ನನ್ನ ಮಿತ್ರರು ಇದ್ದೀರಿ. ಒಬ್ಬರಾದರೂ ನನಗೆ ಇದನ್ನು ತಿಳಿಸಬೇಡವೆ? ತಿಳಿಸಿದ್ದಿದ್ದರೆ, ಲೋಹದ ಶಬ್ದ ಬಾರದ ಹಾಗೆ ಕತ್ತಿಯನ್ನು ಬೀಸುತ್ತಿದ್ದೆ. ಈಗ ನೀವು ಮಾಡಿದ ಈ ಮೋಸ ದಿಂದ ನನ್ನ ಖಡ್ಗಕೌಶಲಕ್ಕೆ ಕುಂದು ಉಂಟಾಯಿತು." ಎಂದನು.

ಮತ್ತೆಯೂ ಅವನಿಗೆ ಮಲ್ಲರ ಮೇಲೆ ರೋಷ ಬಂತು. "ನೀವು ಒಳಗೆ ಕಬ್ಬಿಣವಿರಿಸಿದ್ದುದು ನನಗೆ ತಿಳಿಯಲಿಲ್ಲ. ನಾನು ಎಂದಿನಂತೆ ಕತ್ತಿಯನ್ನು ಬೀಸಿದ್ದಿದ್ದರೆ, ಬಿದಿರನ್ನು ಕಡಿಯಲು ಕೂಡ ಬಂಧುಲನಿಗೆ ಬಾರದು ಎಂದು ನನಗೆ ಅಪಖ್ಯಾತಿ ಬರುತ್ತಿತ್ತು." ಎಂದು ಕೂಗಾಡಿದ.

ಮನೆಗೆ ಹೋದ ಮೇಲೂ ಅವನ ಕೋಪ ಶಾಂತವಾಗಲಿಲ್ಲ. "ಈ ಮಲ್ಲರನ್ನೆಲ್ಲ ಸಂಹರಿಸಿದಲ್ಲದೆ ನನ್ನ ಮನಸ್ಸಿಗೆ ಶಾಂತಿಯಿಲ್ಲ." ಎಂದ.

ತಾಯಿತಂದೆ ಏನೇನೋ ಸಮಾಧಾನ ಹೇಳಿ, ಅವನ ಮನಸ್ಸನ್ನು ಕೊಲೆಯಿಂದ ತಿರುಗಿಸಿದರು.

"ಒಳ್ಳೆಯದು. ನಾನು ಇವರ ಮೇಲೆ ಕೈಮಾಡುವುದಿಲ್ಲ. ಆದರೂ ಇವರೊಡನೆ ಒಂದೇ ಊರಿನಲ್ಲಿ ವಾಸವಾಗಿರುವುದು ನನ್ನ ಮನಸ್ಸಿಗೆ ರುಚಿಸುವುದಿಲ್ಲ. ನಾನು ಈ ಊರನ್ನು ಬಿಟ್ಟುಹೋಗಿ, ನನ್ನ ಬಾಲ್ಯದ ಸ್ನೇಹಿತನೊಬ್ಬನೊಡನೆ ಹೋಗಿ ಸೇರಿಕೊಳ್ಳುತ್ತೇನೆ." ಎಂದು ಹೇಳಿ, ಬಂಧುಲನು ವೈಶಾಲಿಯಿಂದ ನೇರವಾಗಿ ಶ್ರಾವಸ್ತಿಗೆ ಹೋದನು.

ಪ್ರಸೇನಜಿತ್ ರಾಜನು ಬಂಧುಲನ ಆಗಮನವನ್ನು ಕೇಳಿ, ತಾನೇ ಅವನನ್ನು ಕರೆದುತರಲು ಎದುರುಹೋಗಿ, ಸಮಸ್ತ ಸನ್ಮಾನಗಳಿಂದ ಅವನಿಗೆ ಉಪಚಾರಮಾಡಿ. ಅವನನ್ನು ನಗರದೊಳಕ್ಕೆ ಕರೆದುತಂದು, ಅವನಿಗೆ ಮುಖ್ಯ ಸೇನಾಧಿಪತಿಯ ಪಟ್ಟವನ್ನು ಕಟ್ಟಿದನು.

ಅಲ್ಲಿ ಹೀಗೆ ನೆಲೆಯಾಗಿ ನಿಂತ ಮೇಲೆ, ಬಂಧುಲನು ತನ್ನ ತಾಯಿ ತಂದೆಯನ್ನು ಶ್ರಾವಸ್ತಿಗೇ ಬರಮಾಡಿಕೊಂಡು, ಅವರೊಡನೆ ಅಲ್ಲಿಯೇ ಸ್ವಸ್ಥವಾಗಿ ನಿಂತನು.

— ೨ —

ಒಂದು ದಿವಸ, ಪ್ರಸೇನಜಿತ್ ರಾಜನು ತನ್ನ ಪ್ರಾಸಾದದ ಉಪ್ಪರಿಗೆಯ ಮೇಲೆ ನಿಂತು, ಕೆಳಗಿನ ಬೀದಿಯಲ್ಲಿ ಹೋಗಿಬರುವವರನ್ನು ನೋಡುತ್ತಾ, ಮಧ್ಯಾಹ್ನದ ಹೊತ್ತಿನಲ್ಲಿ ಸಾವಿರಾರು ಭಿಕ್ಷುಗಳು ಗುಂಪುಗುಂಪಾಗಿ ಒಂದೇ ದಿಕ್ಕಿಗೆ ಹೋಗುವುದನ್ನು ಕಂಡನು.

"ಇವರೆಲ್ಲರೂ ಎಲ್ಲಿಗೆ ಹೋಗುತ್ತಿದ್ದಾರೆ?" ಎಂದು ಹತ್ತಿರದವರನ್ನು ಕೇಳಿದನು.

"ದೊರೆಯೆ, ಇವರಲ್ಲಿ ಒಂದು ಎರಡು ಸಾವಿರ ಜನ ಅನಾಥಪಿಂಡಿಕನ ಮನೆಗೆ ಹೋಗುತ್ತಾರೆ, ಒಂದು ಐನೂರು ಜನ ಚಿಕ್ಕ ಅನಾಥಪಿಂಡಿಕನ ಮನೆಗೆ ಹೋಗುತ್ತಾರೆ, ಅಷ್ಟೇ ಸಂಖ್ಯೆಯ ಭಿಕ್ಷುಗಳು ವಿಶಾಖೆಯ ಮನೆಗೂ ಸುಪ್ರದಾಸಿಯ ಮನೆಗೂ ಭಿಕ್ಷಾದಿಗಳಿಗಾಗಿ ಹೋಗುತ್ತಾರೆ."

ಆಗ, ದೊರೆಗೆ ತಾನೂ ತನ್ನ ಮನೆಗೆ ಭಿಕ್ಷುಗಳನ್ನು ಭಿಕ್ಷೆಗಾಗಿ ಕರೆಯಬೇಕೆಂದು ಇಚ್ಛೆಬಂತು. ಅದೇ ದಿನವೇ ವಿಹಾರಕ್ಕೆ ಹೋಗಿ, ಭಗವಂತನೂ ಆತನ ಭಿಕ್ಷುಸಹಸ್ರವೂ ತನ್ನ ಮನೆಗೆ ಮಾರನೆಯ ದಿನದ ಭಿಕ್ಷಕ್ಕೆ ಬರಬೇಕೆಂದು ಬೇಡಿದನು. ತನ್ನ ಬೇಡಿಕೆಯಂತೆ ಬಂದ ಭಿಕ್ಷುಸಂಘಕ್ಕೆ ತಾನೇ ಕೈಯಾರೆ ಪ್ರೀತಿಯಿಂದ ಭಿಕ್ಷೆಯಿಟ್ಟು ತೃಪ್ತಿಯನ್ನು ಹೊಂದಿದನು.

ಹೀಗೆ ಏಳು ದಿವಸ ಭಕ್ತಿಯಿಂದ ಭಿಕ್ಷೆಯಿಕ್ಕಿ, ಅನಂತರ ಭಗವಂತನಲ್ಲಿ ಪ್ರಸೇನಜಿತನು ಹೀಗೆಂದು ಪ್ರಾರ್ಥನೆ ಸಲ್ಲಿಸಿದನು:

"ಭಗವನ್! ನಾಳೆಯಿಂದ ಇನ್ನು ಮುಂದೆ ಐನೂರು ಭಿಕ್ಷುಸಂಘದೊಡನೆ ಇಲ್ಲಿಯೇ ಭಿಕ್ಷೆಗೆ ದಯೆಮಾಡಬೇಕು."

"ಮಹಾರಾಜ! ಬುದ್ಧರುಗಳು ಒಂದೇ ಕಡೆ ಭಿಕ್ಷೆಗಾಗಿ ಹೋಗಲಾರರು. ಅವರಿಗೆ ಭಿಕ್ಷೆಯಿಕ್ಕಲು ಅನೇಕರು ಬಯಸುತ್ತಾರೆ."

"ಹಾಗಾದರೆ, ತಮಗೆ ಬದಲಾಗಿ ಬೇರೆ ಯಾರನ್ನಾದರೂ ಭಿಕ್ಷುಸಂಘದೊಡನೆ ಭಿಕ್ಷೆಗೆ ಕಳುಹಿಸೋಣವಾಗಲಿ."

ಭಗವಂತನು ಆ ಕಾರ್ಯಕ್ಕೆ ಸ್ಥವಿರ ಆನಂದನನ್ನು ನೇಮಿಸಿದನು.

ಆನಂದನೂ ಅವನೊಡನೆ ಐನೂರು ಭಿಕ್ಷುಗಳೂ ಬಂದಾಗ, ದೊರೆ ತಾನೇ ಅವರನ್ನು ಎದುರುಗೊಂಡು ಕರೆದು ತಂದು, ಅವರ ಪಾತ್ರೆಗಳನ್ನು ತಾನೇ ಅನ್ನಾಹಾರದಿಂದ ತುಂಬಿ, ಅವರನ್ನು ಸತ್ಕರಿಸಿದನು. ಹೀಗೆ, ಒಂದು ದಿವಸವಲ್ಲ, ಏಳು ದಿವಸಗಳ ಕಾಲ ತಾನೇ ನಿಂತು ಉಪಚರಿಸಿದನು.

ಎಂಟನೆಯ ದಿವಸ ದೊರೆಗೆ ಸ್ವಲ್ಪ ಮನಸ್ಸಿನ ಆಲಸ್ಯ ತಲೆದೋರಿತು. ಕರ್ತವ್ಯದಲ್ಲಿ ಸ್ವಲ್ಪ ಪರಾಙ್ಮುಖತೆ ಕಂಡುಬಂದಿತು. ಅತಿಥಿ ಸತ್ಕಾರದಲ್ಲಿ ಅರಸನಿಗೆ ಮನಸ್ಸು ಇಳಿಮುಖವಾಗುತ್ತಿದೆ ಎಂಬುದನ್ನು ತಿಳಿದು, ಕೆಲವರು ಆ ದಿನದಿಂದ ಮತ್ತೆ ಅರಮನೆಗೆ ಬರಲಿಲ್ಲ. ಅದರ ಮಾರನೆಯ ದಿವಸ ಇನ್ನು ಕೆಲವರು ಭಿಕ್ಷುಗಳು ಬಾರದೆ ನಿಂತರು. ಅದರ ಮಾರನೆಯ ದಿನ ಮತ್ತೂ ಕೆಲವರು ಬರದೆ ನಿಂತರು. ಹೀಗಾಗಿ, ಆ ಮೂರನೆಯ ದಿವಸ, ಸ್ಥವಿರ ಆನಂದನು ಹೊರತು ಬೇರೆ ಯಾವ ಭಿಕ್ಷುವೂ ಪ್ರಸೇನಜಿತನ ಮನೆಗೆ ಭಿಕ್ಷೆಗೆ ಬರಲಿಲ್ಲ.

ನಾಲ್ಕನೆಯ ದಿವಸ, ಭಿಕ್ಷುಗಳ ಆರೋಗಣೆ ಮುಗಿದು ಅವರು ಹೊರಡುವ ಹೊತ್ತಿಗೆ ದೊರೆ ಬಂದು ನೋಡಿದರೆ—ಹಾಕಿದ ಮಣೆಗೆ ಹಾಗೇ ಇದೆ, ಮಾಡಿದ ಅಡುಗೆ ಮಿಕ್ಕೇ ಇದೆ!

"ಈ ದಿವಸ ಭಿಕ್ಷುಗಳು ಬರಲಿಲ್ಲವೆ?" ಎಂದು ದೊರೆ ಕೇಳಿದ.

"ಸ್ಥವಿರ ಆನಂದ ಮಾತ್ರವಲ್ಲದೆ ಬೇರೆ ಯಾರೂ ಬರಲಿಲ್ಲ."

"ಇವರಿಗೆ ಸತ್ಕಾರಮಾಡಬೇಕೆಂದು ಇಷ್ಟೆಲ್ಲಾ ಸಿದ್ಧಮಾಡಿಕೊಂಡು, ನನಗಾದ ನಷ್ಟ ಎಷ್ಟು!" ಎಂದು ದೊರೆ ಕೋಪಕೊಂಡು, ಅಲ್ಲಿಂದ ವಿಹಾರಕ್ಕೆ ಹೋಗಿ, ಭಗವಂತನನ್ನು ಕಂಡನು.

"ಭಗವನ್! ಐನೂರು ಭಿಕ್ಷುಗಳ ಭಿಕ್ಷೆಗಾಗಿ ಈ ದಿವಸ ನಾನು ಅಡುಗೆ ಮಾಡಿಸಿದೆ. ಆದರೆ ಬಂದವನು ಆರ್ಯ ಆನಂದ ಒಬ್ಬ ಮಾತ್ರ. ಹಾಕಿದ ಮಣೆ ಹಾಗೇ ಇದೆ, ಮಾಡಿಸಿದ ಅಡುಗೆ ಮಿಕ್ಕೇ ಇದೆ. ಒಬ್ಬ ಭಿಕ್ಷುವಾದರೂ ನಮ್ಮ ಮನೆಯ ಕಡೆಗೆ ತಲೆಹಾಕಿಲ್ಲ. ಏಕೆ, ಭಗವನ್?"

ಭಗವಂತನು ಹೇಳಿದನು: "ದೊರೆಯೆ, ಇದಕ್ಕೆ ಕಾರಣವಿಷ್ಟೆ. ಭಿಕ್ಷುಸಂಘಕ್ಕೆ ನಿನ್ನಲ್ಲಿ ಶ್ರದ್ಧೆ ಸಾಲದು. ಅದರಿಂದಾಗಿ ಅವರು ಬರುತ್ತಿಲ್ಲ."

"ಮತ್ತೆ, ಆನಂದ ಮಾತ್ರ ಬರುವುದಕ್ಕೆ ಕಾರಣ?"

"ನಿನ್ನ ಶ್ರದ್ಧೆ ಕಡಮೆಯಾಗಿದ್ದರೂ ಅದು ಸಂಪೂರ್ಣ ಮಾಯ ವಾಗಿಲ್ಲ. ನಿನ್ನ ಶ್ರದ್ಧೆಯ ಕಿಡಿ ಆರದಂತೆ ಆನಂದ ನೋಡಿಕೊಳ್ಳು ತ್ತಿದ್ದಾನೆ."

ಎಂಬುದಾಗಿ ಭಗವಂತನು ಹೇಳಿ, ಅದೇ ಸಂದರ್ಭದಲ್ಲಿ ಭಿಕ್ಷು ಸಂಘವನ್ನು ಉದ್ದೇಶಿಸಿ, ಹೀಗೆ ಹೇಳಿದನು:

"ಭಿಕ್ಷುಗಳೆ, ಕೆಲವು ಮನೆಗಳಿಗೆ ಭಿಕ್ಷುಗಳು ಹೋಗಬೇಕಾದುದಿಲ್ಲ. ಹೋಗಬೇಕಾಗಿ ಬಂದರೂ, ಅಲ್ಲಿ ಕುಳಿತುಕೊಳ್ಳಬೇಕಾದುದಿಲ್ಲ. ಎಂಥವು ಆ ಕೆಲವು ಮನೆಗಳು? ಹೋದರೆ, ಪ್ರೀತಿಯಿಂದ ಎದ್ದು ಕರೆಯುವುದಿಲ್ಲ, ಪ್ರೀತಿಯಿಂದ ಮಾತನಾಡಿಸುವುದಿಲ್ಲ, ಪ್ರೀತಿಯಿಂದ ಪೀಠ ಕೊಡುವುದಿಲ್ಲ, ಇರುವುದನ್ನು ಮುಚ್ಚಿರಿಸಿಕೊಳ್ಳುತ್ತಾರೆ, ಇದ್ದುದರಲ್ಲಿ ಅಲ್ಪವನ್ನು ನೀಡು ತ್ತಾರೆ, ಉತ್ತಮವಾದ ವಸ್ತು ಇದ್ದರೂ ಅಧಮವಾದುದನ್ನು ಇಕ್ಕುತ್ತಾರೆ, ಮರ್ಯಾದೆಯಿಂದ ಒಪ್ಪಿಸುವ ಬದಲು ಮುಖದ ಮೇಲೆ ಎಸೆಯುತ್ತಾರೆ, ಕುಳಿತು ಧರ್ಮವನ್ನು ಕೇಳುವುದಿಲ್ಲ, ಒರಟಾಗಿ ಮಾತನಾಡುತ್ತಾರೆ. ಈ ಒಂಬತ್ತು ಅವಗುಣಗಳು ಉಳ್ಳವರ ಮನೆಗೆ ಭಿಕ್ಷುಗಳು ಹೋಗಬೇಕಾ ಗಿಲ್ಲ, ಹೋದರೆ ಅಲ್ಲಿ ಕುಳಿತುಕೊಳ್ಳಬೇಕಾದ್ದಿಲ್ಲ."

ಹೀಗೆಂದು ಬೋಧಿಸಿ, ಭಗವಂತನು ಪುನಃ ಹೇಳಿದನು:

"ಭಿಕ್ಷುಗಳೆ, ಕೆಲವು ಮನೆಗಳಿಗೆ ಹೋಗತಕ್ಕದ್ದು; ಹೋಗಿ ಅಲ್ಲಿ ಕುಳ್ಳಿರತಕ್ಕದ್ದು. ಎಂಥವು ಆ ಕೆಲವು ಮನೆಗಳು? ಹೋದರೆ, ಪ್ರೀತಿ ಯಿಂದ ಎದ್ದು ಕರೆಯುತ್ತಾರೆ, ಪ್ರೀತಿಯಿಂದ ಮಾತನಾಡಿಸುತ್ತಾರೆ, ಪ್ರೀತಿಯಿಂದ ಪೀಠ ಕೊಡುತ್ತಾರೆ, ಇರುವುದನ್ನು ಮುಚ್ಚಿಟ್ಟುಕೊಳ್ಳದೆ ಇಕ್ಕುತ್ತಾರೆ, ಅವಮತಿಯಾಗದಂತೆ ಮರ್ಯಾದೆಯಿಂದ ಒಪ್ಪಿಸುತ್ತಾರೆ, ಕುಳಿತು ಧರ್ಮವನ್ನು ಕೇಳುತ್ತಾರೆ, ಮೃದುವಾದ ಸ್ವರದಿಂದ ಹಿತವಾಗಿ ಮಾತನಾಡುತ್ತಾರೆ. ಈ ಒಂಬತ್ತು ಗುಣಗಳುಳ್ಳವರ ಮನೆಗೆ ಭಿಕ್ಷುಗಳು ಹೋಗತಕ್ಕದ್ದು, ಹೋಗಿ ಅಲ್ಲಿ ಕುಳ್ಳಿರತಕ್ಕದ್ದು."

ಅನಂತರ ಭಗವಂತನು ಪ್ರಸೇನಜಿತ್ ರಾಜನನ್ನು ಕುರಿತು ಹೇಳಿ ದನು: "ಈ ಕಾರಣಗಳಿಂದ, ಮಹಾರಾಜ, ಭಿಕ್ಷುಗಳಿಗೆ ನಿನ್ನಲ್ಲಿ ಶ್ರದ್ಧೆ

ಕಡಮೆಯಾಗಿದೆ. ಈ ಕಾರಣಗಳಿಂದ ಅವರು ನಿನ್ನ ಭಿಕ್ಷೆಗೆ ಬಾರದೆ ಹೋಗಿದ್ದಾರೆ."

ಭಗವಂತನ ವಚನಗಳನ್ನು ಕೇಳಿದ ಪ್ರಸೇನಜಿತನಿಗೆ ಹೀಗೆ ಆಲೋಚನೆ ಬಂತು: "ನಾನು ಏನಾದರೂ ಮಾಡಿ, ಈ ಭಿಕ್ಷುಸಂಘದ ಶ್ರದ್ಧೆಯನ್ನು ಸಂಪಾದಿಸಿಕೊಳ್ಳಬೇಕು. ಅದಕ್ಕೆ ಇದೇ ಸುಲಭವಾದ ದಾರಿ: ಭಗವಂತನಿಗೆ ಸಂಬಂಧಿಗಳಾದ ಶಾಕ್ಯರ ಕುಲದಿಂದ ಹೆಣ್ಣನ್ನು ತಂದು ಮದುವೆಯಾದರೆ, 'ದೊರೆಯು ಭಗವಂತನಿಗೆ ಸಂಬಂಧಿಯಾದವನು' ಎಂದು ಭಿಕ್ಷುಗಳು ನನ್ನ ಮನೆಗೆ ಬರುತ್ತಾರೆ. ಹೌದು, ಹೀಗೇ ಮಾಡಬೇಕು." ಎಂದುಕೊಂಡು, ಅವನು ಶಾಕ್ಯರ ಕಡೆಗೆ ದೂತರನ್ನು ಕಳುಹಿಸಿದನು.

"ದೂತರು ನೀವು ಹೋಗಿ, ಶಾಕ್ಯಕುಲದ ಹೆಣ್ಣನ್ನು ನಮಗೆ ಪಾಣಿಗ್ರಹಣಕ್ಕಾಗಿ ಪ್ರಾರ್ಥಿಸಿರಿ. ಅವಳು ಶಾಕ್ಯರಲ್ಲಿ ಯಾರ ಮಗಳೆಂದು ಕೇಳಿ ತಿಳಿದುಬನ್ನಿರಿ." ಎಂದನು.

ಅದರಂತೆ ಆ ದೂತರು ಶಾಕ್ಯರ ನಾಡಿಗೆ ಹೋಗಿ, ಕನ್ಯೆಗಾಗಿ ಪ್ರಾರ್ಥಿಸಿದರು.

ಶಾಕ್ಯರು ಸಭೆ ಸೇರಿದರು. "ಈ ದೊರೆ ನಮಗೆ ಶತ್ರುವಾದವನು. ಇವನು ಕೇಳಿದುದನ್ನು ಇಲ್ಲವೆಂದರೆ, ಇವನಿಗೆ ರೋಷಬಂದು, ನಮ್ಮನ್ನು ನಾಶಮಾಡಿಯಾನು. ಆದರೆ, ಹೆಣ್ಣು ಕೊಡೋಣವೆಂದರೆ, ಇವನು ನಮಗೆ ಸಮಾನಕುಲದವನಲ್ಲ ಇದಕ್ಕೆ ಏನು ಮಾಡೋಣ?" ಎಂದು ಆಲೋಚನೆ ಮಾಡಿದರು.

ಆಗ, ಮಹಾನಾಮನೆಂಬ ಶಾಕ್ಯನು ಹೇಳಿದನು: "ನನಗೆ ನನ್ನ ದಾಸಿಯಲ್ಲಿ ಹುಟ್ಟಿದ ಮಗಳೊಬ್ಬಳಿದ್ದಾಳೆ. ಅವಳ ಹೆಸರು: ವಾಸಭ ಕ್ಷತ್ರಿಯಾ. ಅವಳ ಸೌಂದರ್ಯವು ಅನ್ಯಾದೃಶವಾದದ್ದು. ಅವಳನ್ನು ಪ್ರಸೇನಜಿತನಿಗೆ ಕಳುಹಿಸಿಕೊಡೋಣ."

ಉಳಿದ ಶಾಕ್ಯರು ಅವನ ಮಾತನ್ನು ಅನುಮೋದಿಸಿ, ಬಂದ ದೂತರಿಗೆ ತಮ್ಮ ಒಪ್ಪಿಗೆಯನ್ನು ತಿಳಿಸಿದರು.

"ಆಗಬಹುದು. ನಮ್ಮ ಕನ್ಯೆಯರಲ್ಲಿ ಒಬ್ಬಳನ್ನು ಪ್ರಸೇನಜಿತನಿಗೆ ಮದುವೆಗಾಗಿ ಒಪ್ಪಿಸುತ್ತೇವೆ."

"ಯಾರ ಮಗಳು ಅವಳು?"

"ಶಾಕ್ಯನಾದ ಮಹಾನಾಮನ ಮಗಳು. ಮಹಾನಾಮನು ಭಗವಂತನಿಗೆ ಸೋದರಮಾವನ ಮಗನಾಗಬೇಕು. ಹೆಣ್ಣಿನ ಹೆಸರು ವಾಸಭಕ್ಷತ್ರಿಯಾ."

ದೂತರು ಹಿಂದಿರುಗಿ ಹೋಗಿ, ದೊರೆಗೆ ವರದಿಮಾಡಿದರು.

ದೊರೆ ಹೇಳಿದನು: "ಹಾಗಾದರೆ, ತುಂಬ ಒಳ್ಳೆಯದು. ಕೂಡಲೆ ಅವಳನ್ನು ಕರೆದು ತನ್ನಿರಿ. ಆದರೆ, ಕ್ಷತ್ರಿಯ ಕುಲದವರು ತುಂಬಾ ಕುಟಿಲ ತಿಳಿದವರು. ಮೋಸಮಾಡಿ, ಯಾರಾದರೂ ದಾಸೀಪುತ್ರಿಯನ್ನು ಕಳುಹಿಸಿಯಾರು. ಆದ್ದರಿಂದ, ಆ ಹೆಣ್ಣು ತನ್ನ ತಂದೆಯ ಸಹಪಂಕ್ತಿಯಲ್ಲಿ ಅನ್ನ ತಿಂದ ಹೊರತು, ಅವಳನ್ನು ಕರೆದುತರಬೇಡಿರಿ."

ದೂತರು ಹೋಗಿ, ಮಹಾನಾಮನಿಗೆ ಹೇಳಿದರು: "ಪ್ರಭುವೆ, ನೀನೂ ನಿನ್ನ ಮಗಳೂ ಸಹಪಂಕ್ತಿಯಲ್ಲಿ ಭೋಜನ ಮಾಡಬೇಕೆಂದು ನಮ್ಮ ದೊರೆ ಇಚ್ಛಿಸುತ್ತಾನೆ."

"ಒಳ್ಳೆಯದು, ಅದಕ್ಕೇನು ಅಡ್ಡಿ" ಎಂದು ಮಹಾನಾಮನು, ಮಧ್ಯಾಹ್ನ ಊಟದ ಹೊತ್ತಿನಲ್ಲಿ ವಾಸಭಕ್ಷತ್ರಿಯೆಯನ್ನು ಸಾಲಂಕಾರಳಾಗಿ ಬರಮಾಡಿಕೊಂಡನು. ಅವಳೊಡನೆ ಊಟಮಾಡಿದ ಹಾಗೆ ಮಾಡಿ, ಅನಂತರ ಅವಳನ್ನು ಪ್ರಸೇನಜಿತನ ದೂತರಿಗೆ ಒಪ್ಪಿಸಿದನು.

ದೂತರು ಅವಳನ್ನು ಶ್ರಾವಸ್ತಿಗೆ ಕರೆದುಕೊಂಡು ಹೋಗಿ, ಕಪಿಲವಸ್ತುವಿನಲ್ಲಿ ನಡೆದದ್ದನ್ನೆಲ್ಲ ದೊರೆಗೆ ತಿಳಿಸಿದರು. ದೊರೆ ತನ್ನ ಕಾರ್ಯಾಲೋಚನೆ ಸಫಲವಾಯಿತು ಎಂದು ಹಿಗ್ಗಿ, ವಾಸಭಕ್ಷತ್ರಿಯೆಯನ್ನು ತನ್ನ ಪಟ್ಟಮಹಿಷಿಯ ಸ್ಥಾನಕ್ಕೆ ನೇಮಿಸಿಕೊಂಡು, ಅಭಿಷೇಕವನ್ನು ಮಾಡಿದನು.

ಸ್ವಲ್ಪ ಕಾಲದಲ್ಲೇ ವಾಸಭಕ್ಷತ್ರಿಯಾ ಒಂದು ಗಂಡು ಮಗುವನ್ನು ಹೆತ್ತಳು. ಮಗುವಿನ ಮೈಯ ಬಣ್ಣ ಚೊಕ್ಕ ಚಿನ್ನದ ಹಾಗಿತ್ತು.

ಗಂಡು ಮಗುವಾಯಿತೆಂದು ದೊರೆಗೆ ಪರಮ ಸಂತೋಷ. "ವಾಸಭ ಕ್ಷತ್ರಿಯಾ ಗಂಡುಮಗುವನ್ನು ಹಡೆದಿದ್ದಾಳೆ. ಮಗುವಿಗೆ ಏನು ಹೆಸರು ಇಡೋಣ?" ಎಂದು ಪ್ರಸೇನಜಿತನು ತನ್ನ ಅಜ್ಜಿಯ ಬಳಿಗೆ ಮಂತ್ರಿಯನ್ನು ಕಳುಹಿಸಿದನು.

ಆ ಅಜ್ಜಿ ಹೇಳಿದಳು : "ಮದುವೆಯಾಗುವಾಗಲೇ ಈ ವಾಸಭ ಕ್ಷತ್ರಿಯಾ ದೊರೆಯ ಮನಸ್ಸಿಗೂ ಜನರ ಮನಸ್ಸಿಗೂ ವಲ್ಲಭೆಯಾಗಿದ್ದಳು. ಈಗಂತೂ ಗಂಡುಮಗುವನ್ನು ಪಡೆದು, ಇನ್ನಷ್ಟು ವಲ್ಲಭೆಯಾದಳು."

ದೊರೆಯ ಕಡೆಯಿಂದ ಹೋಗಿದ್ದ ಆ ಮಂತ್ರಿಗೆ ಕಿವಿ ಸ್ವಲ್ಪ ಮಂದವಾಗಿತ್ತು. ಆದ್ದರಿಂದ, ಆ ಅಜ್ಜಿ 'ವಲ್ಲಭಾ' ಎಂದು ಹೇಳಿದುದು ಅವನ ಕಿವಿಗೆ 'ವಿಡೂಡಭ' ಎಂದ ಹಾಗಾಯಿತು. ದೊರೆಯ ಹತ್ತಿರ ಬಂದನು. ಹೇಳಿದನು : "ಕುಮಾರನಿಗೆ ವಿಡೂಡಭ ಎಂದು ಹೆಸರಿಡ ಬೇಕಂತೆ."

"ಯಾರೋ ನಮ್ಮ ವಂಶದ ಪೂರ್ವಿಕರ ಹೆಸರಿರಬಹುದೋ ಏನೋ!" ಎಂದುಕೊಂಡು ಪ್ರಸೇನಜಿತನು ಮಗುವಿಗೆ ವಿಡೂಡಭನೆಂದೇ ಹೆಸರಿಟ್ಟನು. ವಿಡೂಡಭನು ಇನ್ನೂ ಮಗುವಾಗಿರುವಾಗಲೇ ಅವನಿಗೆ ಸೇನಾಧಿಪತಿಯ ಪಟ್ಟವನ್ನು ಕಟ್ಟಿ, "ಇದರಿಂದ ಭಗವಂತನಿಗೆ ನನ್ನ ವಿಷಯದಲ್ಲಿ ಪ್ರೀತಿಯುಂಟಾಗುತ್ತದೆ." ಎಂದುಕೊಂಡನು.

ವಿಡೂಡಭನು ಸಮಸ್ತವಾದ ರಾಜವೈಭವಗಳನ್ನು ಅನುಭವಿಸುತ್ತ ಬೆಳೆದನು. ಹೀಗೇ ಅವನಿಗೆ ಏಳು ವರ್ಷ ತುಂಬಿತು.

ಒಂದು ಸಲ, ವಿಡೂಡಭ ನೋಡಿದ : ಇತರ ರಾಜಪುತ್ರರಿಗೆ ಹುಟ್ಟಿದ ಹಬ್ಬ ಆದಾಗ, ಅವರವರ ತಾಯಿಯರ ಕಡೆಯವರು, ಅಜ್ಜ ಅಜ್ಜಿ ಮುಂತಾದವರು ಆ ಮಕ್ಕಳಿಗೆ ಆನೆ ಕುದುರೆ ಮೊದಲಾದ ಆಟದ ಸಾಮಾನುಗಳನ್ನು ಕಳುಹಿಸುತ್ತಿದ್ದರು. ಆದರೆ, ತನಗೆ ಮಾತ್ರ, ತನ್ನ ತಾಯಿಯ ಕಡೆಯವರು ಯಾರೂ ಏನೂ ಕಳುಹಿಸುತ್ತಿರಲಿಲ್ಲ.

ತಾಯಿಯ ಹತ್ತಿರ ಹೋಗಿ ಕೇಳಿದ : "ಅಮ್ಮಾ, ಇತರ ಮಕ್ಕಳಿಗೆ ಅವರ ಮಾತಾಮಹರೂ ಮಾತಾಮಹಿಯರೂ ಏನೇನೋ ಆಟದ

ಸಾಮಾನು ಕೊಟ್ಟು ಕಳುಹಿಸುತ್ತಾರೆ. ನನಗೆ ಮಾತ್ರ ಯಾರೂ ಏನೂ ಕಳುಹಿಸುವುದಿಲ್ಲ. ಏಕಮ್ಮಾ? ನಿನಗೆ ತಾಯಿ, ತಂದೆ ಯಾರೂ ಇಲ್ಲವೆ?"

ತಾಯಿ ಹೇಳಿದಳು: "ಕಂದ, ನಿನ್ನ ಮಾತಾಮಹರುಗಳು ಶಾಕ್ಯ ಕುಲದ ದೊರೆಗಳು. ಅವರು ಇರುವುದು ಬಹಳ ದೂರದಾಚೆ. ಆದ್ದರಿಂದ ಅವರು ಏನನ್ನೂ ಕಳುಹಿಸಲು ಆಗುತ್ತಿಲ್ಲ."

ಹೀಗೆ, ಆ ಏನೂ ಅರಿಯದ ಮಗುವಿಗೆ ಸುಳ್ಳು ಹೇಳಿ, ವಿಷಯವನ್ನು ಮರೆಸಿದಳು.

ವಿಡೂಡಭನಿಗೆ ಹದಿನಾರು ವರ್ಷ ತುಂಬಿತು.

"ಅಮ್ಮಾ, ನಾನು ಹೋಗಿ ನನ್ನ ಮಾತಾಮಹನ ಮನೆಯವರನ್ನು ನೋಡಿಕೊಂಡು ಬರುತ್ತೇನೆ. ನನಗೆ ಅಪ್ಪಣೆ ಕೊಡು." ಎಂದನು.

"ಬಿಡು, ಮಗು ಅಲ್ಲಿ ಹೋಗಿ ನೋಡಬೇಕಾದ್ದು ಏನಿದೆ?" ಎಂದು ಅವಳು ಅವನನ್ನು ತಡೆಯಲು ಏನೇನೋ ಮಾಡಿದಳು.

ವಿಡೂಡಭ ಮತ್ತೆ ಮತ್ತೆ ತಾಯಿಯನ್ನು ಪೀಡಿಸಿದ. ಕಡೆಗೆ ಆ ತಾಯಿ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿದಳು. ಪ್ರಸೇನಜಿತ್ ರಾಜನು ಕೂಡ ಮಗನ ಪ್ರಯಾಣವನ್ನು ಅನುಮೋದಿಸಿ, ಅವನ ಜೊತೆಗೆ ದೊಡ್ಡ ಪರಿವಾರವನ್ನು ಕಳುಹಿಸಿದನು.

ಮಗನು ಕಪಿಲವಸ್ತುವಿಗೆ ಹೋಗಿ ಸೇರುವುದಕ್ಕೆ ಮೊದಲೇ ವಾಸಭ ಕ್ಷತ್ರಿಯಾ ಶಾಕ್ಯರಿಗೆ ಒಂದು ಓಲೆಯನ್ನು ಬರೆದು ಅಟ್ಟಿದಳು: "ನಾನು ಇಲ್ಲಿ ಸುಖವಾಗಿದ್ದೇನೆ. ನನ್ನ ಮಗ ಅಲ್ಲಿಗೆ ಬಂದಾಗ, ಅವನಿಗೆ ಏನೂ ಅಪಚಾರವಾಗದಂತೆ ನೋಡಿಕೊಳ್ಳುವುದು ನಿಮ್ಮ ಭಾರ."

ಶಾಕ್ಯರು ಆ ಓಲೆಯನ್ನು ಓದಿಕೊಂಡರು "ದಾಸಿಯ ಮೊಮ್ಮಗನಾದ ಈ ವಿಡೂಡಭನಿಗೆ ನಮಸ್ಕಾರ ಮಾಡುವುದು ನಮಗೆ ಮರ್ಯಾದೆಯಲ್ಲ. ಇದಕ್ಕೆ ಏನು ಮಾಡೋಣ?" ಎಂದು ಚಿಂತಿಸಿದರು. ಕಡೆಗೆ, ನಮಸ್ಕಾರ ಮಾಡಬೇಕಾದ ವಯಸ್ಸಿನ ಶಾಕ್ಯರ ಕುಮಾರಕರನ್ನೆಲ್ಲಾ ಗ್ರಾಮಾಂತರ ಪ್ರದೇಶಗಳಿಗೆ ಕಳುಹಿಸಿಕೊಟ್ಟು, ವಿಡೂಡಭನ ಆಗಮನವನ್ನು ಎದುರುನೋಡುತ್ತಾ, ತಾವು ಕಪಿಲವಸ್ತುವಿನ ರಾಜರ ವಿಶ್ರಾಂತಿ ಗೃಹದಲ್ಲಿ ಬಂದು ಸೇರಿದರು.

ವಿಡೂಡಭನು ಬಂದಾಗ, ಶಾಕ್ಯರು ಅವನನ್ನು ಆದರದಿಂದ ಬರ ಮಾಡಿಕೊಂಡರು. ಕುಶಲಪ್ರಶ್ನೆಗಳನ್ನು ವಿಚಾರಿಸಿದರು. "ಈತನೇ ನಿನ್ನ ಮಾತಾಮಹ. ಈತನೇ ನಿನ್ನ ಸೋದರ ಮಾವ" ಎಂದು ಒಬ್ಬೊಬ್ಬರನ್ನಾಗಿ ಪರಿಚಯಮಾಡಿಕೊಟ್ಟರು.

ವಿಡೂಡಭನು ತನಗೆ ಒಬ್ಬೊಬ್ಬರ ಪರಿಚಯವಾದಾಗಲೂ ಅವರಿಗೆ ನಮಸ್ಕಾರ ಮಾಡುತ್ತಾ ಹಾಗೇ ಆಲೋಚಿಸಿದನು: "ಇವರಲ್ಲಿ ಯಾರೊಬ್ಬರೂ ನನಗೆ ನಮಸ್ಕಾರ ಮಾಡುವುದಿಲ್ಲ, ಏಕೆ?"

"ನಾನು ನಿಮ್ಮಲ್ಲಿ ಎಲ್ಲರಿಗೂ ನಮಸ್ಕಾರ ಮಾಡಿದರೂ, ನಿಮ್ಮಲ್ಲಿ ಯಾರೂ ನನಗೆ ನಮಸ್ಕಾರ ಮಾಡುತ್ತಿಲ್ಲ, ಏಕೆ?" ಎಂದು ಕೇಳಿದನು.

"ನಿನಗಿಂತ ಚಿಕ್ಕವರೊಬ್ಬರೂ ಈಗ ನಗರದಲ್ಲಿಲ್ಲ. ಗ್ರಾಮಾಂತರಗಳಿಗೆ ಹೋಗಿದ್ದಾರೆ." ಎಂದು ಶಾಕ್ಯರು ಅವನಿಗೆ ಸಮಾಧಾನ ಹೇಳಿದರು. ವಿಡೂಡಭನಿಗೆ ಏನೂ ಅಪಚಾರವಾಗದ ಹಾಗೆ, ಅತ್ಯಂತ ಪ್ರೀತ್ಯಾದರಗಳಿಂದ ಅವನನ್ನು ಸತ್ಕರಿಸಿದರು.

ಹೀಗೇ ಅಲ್ಲಿ ಕೆಲವು ಹಗಲುಗಳು ಇದ್ದು, ವಿಡೂಡಭನು ತನ್ನ ಪರಿವಾರದೊಡನೆ ಹಿಂದಕ್ಕೆ ಹೊರಟನು.

ವಿಡೂಡಭನೂ ಅವನ ಪರಿವಾರವೂ ಕಪಿಲವಸ್ತುವನ್ನು ಬಿಟ್ಟು ಹೋದ ಮೇಲೆ, ಅವರು ಇಳಿದುಕೊಂಡಿದ್ದ ಮನೆಯನ್ನೂ ಅವರು ಉಪಯೋಗಿಸಿದ್ದ ಪೀಠಗಳನ್ನೂ ದಾಸಿಯರು ಬಂದು ಹಾಲು ನೀರುಗಳಿಂದ ತೊಳೆದು ಶುದ್ಧಿ ಮಾಡಿದರು. ಆಗ ಅವರಲ್ಲಿ ಒಬ್ಬಳು ದಾಸಿ, "ಇದೇ ಈ ಪೀಠದ ಮೇಲೆಯೇ ಆ ದಾಸಿಯಾದ ವಾಸಭಕ್ಷತ್ರಿಯೆಯ ಮಗ ಕುಳ್ಳಿರಿಸಿದ್ದದ್ದು!" ಎಂದು ತಿರಸ್ಕಾರದಿಂದ ನುಡಿದಳು.

ಅವಳು ಆ ಮಾತನ್ನು ಎನ್ನುವ ವೇಳೆಗೆ ಸರಿಯಾಗಿ ವಿಡೂಡಭನ ಪರಿವಾರದ ಸೈನಿಕನೊಬ್ಬ ಅಲ್ಲಿಗೆ ಬಂದು, ಅದನ್ನು ಕೇಳಿಸಿಕೊಂಡ. ಅವನು ಹೊರಡುವ ಅವಸರದಲ್ಲಿ ತನ್ನ ಕತ್ತಿಯನ್ನು ಮರೆತುಹೋಗಿದ್ದನಂತೆ. ಅದನ್ನು ಎತ್ತಿಕೊಳ್ಳುವುದಕ್ಕೆ ಈಗ ಬಂದಿದ್ದ. ಅವನ ಕಿವಿಗೆ ಆ ಮಾತು ಬಿತ್ತು. ವಿಚಾರವೇನೆಂದು ಕೇಳಿಕೊಂಡ. ವಾಸಭಕ್ಷತ್ರಿ

ಯೆಯು ಶಾಕ್ಯ ಮಹಾನಾಮನಿಗೂ ಅವನ ದಾಸಿಯೊಬ್ಬಳಿಗೂ ಹುಟ್ಟಿದ ಮಗಳೆಂದು ತಿಳಿದುಕೊಂಡ. "ವಾಸಭಕ್ಷತ್ರಿಯಾ ಶಾಕ್ಯರ ದಾಸಿಯ ಮಗಳಂತೆ!" ಎಂದು ಸೈನ್ಯದಲ್ಲಿ ಸುದ್ದಿ ಹಬ್ಬಿಸಿದ.

ಕೂಡಲೆ ಸೈನ್ಯದಲ್ಲಿ ಕಳಕಳ ಹರಡಿತು. ವಿಡೂಡಭ ಅದೇನೆಂದು ವಿಚಾರಿಸಿ, ಸಂಗತಿಯನ್ನೆಲ್ಲ ಗ್ರಹಿಸಿದ. ಆಗಲೇ ಒಂದು ಘೋರವಾದ ಪ್ರತಿಜ್ಞೆಯನ್ನು ಮಾಡಿದ:

"ನಾನು ಕುಳಿತ ಪೀಠವನ್ನು ಈ ಶಾಕ್ಯರು ಹಾಲು ನೀರುಗಳಿಂದ ತೊಳೆದರಲ್ಲವೆ! ಒಳ್ಳೆಯದು. ನಾನು ರಾಜ್ಯಕ್ಕೆ ಬಂದಾಗ, ಇದೇ ಶಾಕ್ಯರ ಗಂಟಲಿನ ರಕ್ತದಿಂದ ನನ್ನ ಪೀಠವನ್ನು ತೊಳೆಯದಿದ್ದರೆ, ನನ್ನ ಹೆಸರು ವಿಡೂಡಭ ಅಲ್ಲವೇ ಅಲ್ಲ!"

ವಿಡೂಡಭನು ಶ್ರಾವಸ್ತಿಗೆ ಹಿಂತಿರುಗಿದ ಮೇಲೆ, ಮಂತ್ರಿಗಳು ನಡೆದದ್ದನ್ನೆಲ್ಲಾ ಪ್ರಸೇನಜಿತನಿಗೆ ತಿಳಿಸಿದರು. ಶಾಕ್ಯರು ತನಗೆ ಮೋಸ ಮಾಡಿ ದಾಸಿಯ ಮಗಳನ್ನು ಕೊಟ್ಟರೆಂಬುದನ್ನು ಕೇಳಿ, ಪ್ರಸೇನಜಿತನು ಉರಿದೆದ್ದನು. ಅದೇ ಕೋಪದ ಭರದಲ್ಲಿ ವಾಸಭಕ್ಷತ್ರಿಯೆಗೂ ಅವಳ ಮಗನಿಗೂ ರಾಜಮರ್ಯಾದೆಗಳನ್ನು ತಪ್ಪಿಸಿ, ಅವರನ್ನು ಅರಮನೆಯ ದಾಸದಾಸಿಯರನ್ನಾಗಿ ಮಾಡಿದನು.

ಇದಾದ ಕೆಲವು ದಿವಸಗಳ ಮೇಲೆ, ಭಗವಂತನು ಭಿಕ್ಷೆಗಾಗಿ ಪ್ರಸೇನಜಿತನ ಅರಮನೆಗೆ ಬಂದನು. ದೊರೆ ಎದ್ದುಹೋಗಿ ಭಗವಂತನನ್ನು ಉಪಚರಿಸಿ ಕರೆದು ತಂದು, ಕುಳ್ಳಿರಿಸಿದನು.

ಅನಂತರ ಹೇಳಿದನು: "ಭಗವನ್! ನಿಮ್ಮ ಸಂಬಂಧಿಗಳಾದ ಶಾಕ್ಯರು ತಮ್ಮ ದಾಸಿಯೊಬ್ಬಳ ಮಗಳನ್ನು ನನಗೆ ಪಟ್ಟದ ರಾಣಿಯಾಗಿರಲು ಕಳುಹಿಸಿದರಂತೆ. ಇದುವರೆಗೆ ಅದು ನನಗೆ ಗೊತ್ತಿರಲಿಲ್ಲ. ಈಗ ಗೊತ್ತಾದ ಮೇಲೆ, ಅವರಿಗೆ ರಾಜಗೌರವಗಳನ್ನು ತಪ್ಪಿಸಿ, ಅವರನ್ನು ದಾಸದಾಸಿಯರ ಜೊತೆಗೆ ಅಟ್ಟಿದ್ದೇನೆ."

ಭಗವಂತನು ಹೇಳಿದನು: "ಮಹಾರಾಜ, ಶಾಕ್ಯರು ಹಾಗೆ ಮಾಡಿದ್ದು ತುಂಬ ತಪ್ಪು. ನಿನಗೆ ಸಮಾನವಾದ ಕುಲದ ಹೆಣ್ಣೊಂ

ದನ್ನು ಅವರು ಒಪ್ಪಿಸಬೇಕಾಗಿತ್ತು. ಆದರೆ, ಮಹಾರಾಜ, ಈಗ ನೀನು ಮಾಡಿದ್ದಾದರೂ, ಇದೂ ತುಂಬ ತಪ್ಪು. ಹಾಸಭಕ್ಷತ್ರಿಯಾ ಕ್ಷತ್ರಿಯ ನಾದ ಮಹಾನಾಮನ ಮಗಳು, ಕ್ಷತ್ರಿಯನಾದ ನಿನ್ನಿಂದ ಪಟ್ಟದ ರಾಣಿ ಯಾಗಿ ಅಭಿಷೇಕ ಪಡೆದವಳು. ವಿಡೂಡಭನಾದರೋ ಕ್ಷತ್ರಿಯನಾದ ನಿನ್ನಿಂದ ಜನ್ಮ ತಾಳಿದವನು. ತಾಯಿ ಯಾವ ಕುಲದವಳಾದರೇನು, ದೊರೆಯೆ? ಸಂತತಿಗೆ ಸಮಾಜದಲ್ಲಿ ಸ್ಥಾನಗಣನೆಯಾಗುವುದು ತಂದೆಯ ಕುಲದ ಆಧಾರದಿಂದ ಮಾತ್ರ. ಹಿಂದೆ, ವಾರಾಣಸಿಯಲ್ಲಿ, ಕಟ್ಟಿಗೆ ಆರಿಸಿ ಹೊತ್ತು ತಂದು ಮಾರುತ್ತಿದ್ದ ಹೆಣ್ಣುಮಗಳೊಬ್ಬಳು ರಾಜನಿಗೆ ಪಟ್ಟದ ರಾಣಿಯಾಗಲಿಲ್ಲವೆ? ಅವಳ ಮಗನೇ ಕಾಷ್ಠವಾಹನನೆಂಬ ಹೆಸರಿ ನಿಂದ ವಾರಾಣಸೀನಗರದಲ್ಲಿ ಧರ್ಮದಿಂದ ರಾಜ್ಯವಾಳಲಿಲ್ಲವೆ?"

ಭಗವಂತನು ಆಡಿದ ಧರ್ಮಕಥನವನ್ನು ಕೇಳಿ, ಪ್ರಸೇನಜಿತನಿಗೆ ತಾನು ಮಾಡಿದ ತಪ್ಪಿನ ಅರಿವಾಯಿತು. ಭಗವಂತನ ಮಾತನ್ನು ತಾನು ಒಪ್ಪಿಕೊಂಡು, ವಾಸಭಕ್ಷತ್ರಿಯೆಯನ್ನೂ ಅವಳ ಮಗನನ್ನೂ ಮೊದಲಿ ನಂತೆ ಪಟ್ಟಮಹಿಷೀಪದದಲ್ಲಿಯೂ ಸೇನಾಧಿಪತಿಯ ಸ್ಥಾನದಲ್ಲಿಯೂ ಸ್ಥಾಪಿಸಿದನು.

— ೩ —

ಇತ್ತ, ಕುಶಿನಾರಾ ನಗರದಲ್ಲಿ, ಬಂಧುಲನ ಹೆಂಡತಿಯಾದ ಮಲ್ಲಿಕಾದೇವಿಗೆ ಅನೇಕ ಕಾಲವಾದರೂ ಮಕ್ಕಳಾಗಲಿಲ್ಲ. ಮಕ್ಕಳಿಲ್ಲದ ಮಡದಿಯ ಜೊತೆಗೆ ಇರಲು ಬೇಸತ್ತು, ಬಂಧುಲನು "ನೀನು ನಿನ್ನ ತಾಯಿಯ ಮನೆಗೆ ಹೋಗಬಹುದು" ಎಂದು ಅವಳನ್ನು ಅಟ್ಟಿದನು.

ಆ ಹೆಣ್ಣು, ಬೇರೆ ಏನು ಮಾಡಲೂ ಉಪಾಯ ತೋರದೆ, "ಹೋಗುವ ಮೊದಲು, ಒಮ್ಮೆ ಭಗವಂತನನ್ನು ದರ್ಶನಮಾಡಿಕೊಂಡು ಹೋಗೋಣ" ಎಂದು ಜೇತವನಕ್ಕೆ ಬಂದಳು.

ಭಗವಂತನಿಗೆ ಪ್ರಣಾಮಮಾಡಿ, ಹೊರಡುವ ಮುಂಚೆ ಸ್ವಲ್ಪ ತಡೆದು ನಿಂತಳು.

ಭಗವಂತನು ಕೇಳಿದನು :

"ಎಲ್ಲಿಗೆ ಹೊರಟಿರುವೆ, ಮಲ್ಲಿಕಾ?"

"ನನ್ನ ಪತಿ ನನ್ನನ್ನು ನನ್ನ ತವರುಮನೆಗೆ ಕಳಿಸುತ್ತಿದ್ದಾನೆ, ಭಗವನ್."

"ಅದೇನು ಕಾರಣ, ಮಲ್ಲಿಕಾ?"

"ನಾನು ಮಕ್ಕಳನ್ನು ಪಡೆಯುದ ಬಂಜೆಯೆಂದು, ಭಗವನ್."

"ಇಷ್ಟೇ ಕಾರಣವಾದರೆ, ಮಲ್ಲಿಕಾ, ನಿನ್ನ ಪತಿ ನಿನ್ನನ್ನು ನಿನ್ನ ತವರುಮನೆಗೆ ಕಳುಹಿಸತಕ್ಕದ್ದಲ್ಲ. ನೀನು ನಿನ್ನ ಗಂಡನ ಮನೆಗೇ ಹೋಗಿ, ಅಲ್ಲೇ ಇರತಕ್ಕದ್ದು. ಹಾಗೆಂದು ಅವನಿಗೆ ಹೇಳು."

ಮಲ್ಲಿಕಾ ಆನಂದದಿಂದ ಗಂಡನ ಮನೆಗೆ ಹಿಂದಿರುಗಿದಳು.

"ಮತ್ತೆ ಏಕೆ ಬಂದೆ?" ಎಂದು ಬಂಧುಲ ಕೇಳಿದ.

"ಭಗವಂತನು ನಾನು ಇಲ್ಲೇ ಇರಬೇಕೆಂದು ಹೇಳಿದ್ದಾನೆ."

"ಸರ್ವಜ್ಞನಾದ ಭಗವಂತನು ಹೀಗೆ ಆಜ್ಞೆಮಾಡಿರಬೇಕಾದರೆ, ಇದಕ್ಕೆ ಏನೋ ಕಾರಣವಿರಬೇಕು." ಎಂದು ಬಂಧುಲನು ಮಲ್ಲಿಕೆಯುನ್ನು ಮುಂಚಿನಂತೆ ಮನೆಯಲ್ಲಿರಿಸಿಕೊಳ್ಳಲು ಒಪ್ಪಿದನು.

ಕೆಲವು ಕಾಲವಾದ ಮೇಲೆ, ಮಲ್ಲಿಕಾ ಗರ್ಭವತಿಯಾದಳು. ಆ ಸಮಯಕ್ಕೆ ತಕ್ಕಂತೆ ಬಯಕೆ ತಲೆದೋರಿತು.

"ಗರ್ಭಿಣಿಯರಿಗೆ ಸಹಜವಾದ ಬಯಕೆ ನನಗೆ ಉಂಟಾಗಿದೆ." ಎಂದಳು ಮಲ್ಲಿಕಾ, ತನ್ನ ಪತಿಯ ಹತ್ತಿರ.

"ಏನು ನಿನ್ನ ಬಯಕೆ, ಮಲ್ಲಿಕಾ?"

"ವೈಶಾಲಿಯ ನಗರದ ಮಧ್ಯೆ ಕಮಲಪುಷ್ಪದ ಪುಷ್ಕರಿಣಿಯೊಂದಿದೆ. ಅಭಿಷೇಕ ಸಮಯಗಳಲ್ಲಿ ಮಾತ್ರ ಅಲ್ಲಿಗೆ ಪ್ರವೇಶವುಂಟು. ಅದಕ್ಕೆ ಬಹು ಬಲವಾದ ರಕ್ಷಣೆಯಿದೆ. ಇಂಥ ಪುಷ್ಕರಿಣಿಯಲ್ಲಿ ಇಳಿದು, ಈಜಾಡಿ, ಅಲ್ಲಿಯ ನೀರನ್ನು ಕುಡಿದುಬರಬೇಕೆಂದು ನನಗೆ ಬಯಕೆಯಾಗುತ್ತಿದೆ, ಬಂಧುಲ."

"ಒಳ್ಳೆಯದು, ಮಲ್ಲಿಕಾ. ಚಿಂತಿಸದಿರು. ನಿನ್ನ ಬಯಕೆಯನ್ನು ನಾನು ನಡೆಸಿಕೊಡುತ್ತೇನೆ."

ಎಂದು ಹೆಂಡತಿಗೆ ವಿಶ್ವಾಸದಿಂದ ನುಡಿದು, ಬಂಧುಲನು ತನ್ನ ಬಿಲ್ಲನ್ನು ಕೈಗೆತ್ತಿಕೊಂಡನು. ಆ ಬಿಲ್ಲನ್ನು ಬಗ್ಗಿಸಿ ಹೆದೆಯೇರಿಸುವುದಕ್ಕೆ ಸಾವಿರ ಜನರ ಸಾಮರ್ಥ್ಯ ಬೇಕು. ಅಂತಹ ಬಿಲ್ಲನ್ನು ಲೀಲಾಜಾಲವಾಗಿ ಎತ್ತಿಕೊಂಡು, "ಬಾ, ಮಲ್ಲಿಕಾ. ವೈಶಾಲಿಗೆ ಹೋಗೋಣ!" ಎಂದು ಅವಳನ್ನು ರಥದಲ್ಲಿ ಹತ್ತಿಸಿಕೊಂಡು, ಶ್ರಾವಸ್ತಿಯಿಂದ ವೈಶಾಲಿಗೆ ಹೊರಟನು.

ಹಿಂದೆ, ವೈಶಾಲಿಯಲ್ಲಿ ಲಿಚ್ಛವಿಗಳು ಮಹಾಲಿಗೆ ಕೃತಜ್ಞತೆಯಿಂದ ವಾಸಸ್ಥಾನಕ್ಕೆಂದು ಬಿಟ್ಟುಕೊಟ್ಟಿದ್ದ ಬಳಿಯೇ ಇದ್ದ ಮಹಾದ್ವಾರದ ಬಳಿಗೆ ಬಂಧುಲನ ರಥ ಬಂತು. ಬಂಧುಲನ ರಥಚಕ್ರಗಳ ಚೀತ್ಕಾರವನ್ನು ಕಿವಿಯಿಂದ ಕೇಳಿದಕೂಡಲೆ, ಕಣ್ಣಿನ ದೃಷ್ಟಿ ಮಂದವಾಗಿ ಹೋಗಿದ್ದರೂ, ಮಹಾಲಿಗೆ ಹೀಗೆನ್ನಿಸಿತು: "ಇದು ಬಂಧುಲನ ರಥದ ಧ್ವನಿ. ಈ ದಿವಸ ಈ ಲಿಚ್ಛವಿಗಳಿಗೆ ಏನೋ ಗ್ರಹಚಾರ ಕಾದುಕೊಂಡಿದೆ."

ನಗರದ ನಡುವೆ ಇದ್ದ ಪುಷ್ಕರಿಣಿಯ ಒಳಗೂ ಹೊರಗೂ ಬಲವಾದ ಕಾವಲಿತ್ತು. ಪ್ರಾಕಾರದ ಗೋಡೆಗಳನ್ನು ಯಾರಾದರೂ ದಾಟಿ ಮೇಲಿಂದ ಬರಬಹುದೆಂದು, ಮೇಲುಗಡೆ ಕಬ್ಬಿಣದಿಂದ ಮಾಡಿದ ಬಲೆಯನ್ನು ಹಾಸಿದ್ದರು. ಒಂದು ಪುಟ್ಟ ಹಕ್ಕಿ ಕೂಡ ಒಳಗಿನ ನೀರಿನ ಬಳಿಗೆ ಪ್ರವೇಶಮಾಡುವಂತಿರಲಿಲ್ಲ.

ಆದರೆ, ಸೇನಾಪತಿಯಾದ ಬಂಧುಲನಿಗೆ ಇವೆಲ್ಲ ಯಾವ ಲೆಕ್ಕ? ರಥ ನೇರವಾಗಿ ಪ್ರಾಕಾರದ ಮಹಾದ್ವಾರದೆಡೆಗೆ ನುಗ್ಗಿತು. ಬಂಧುಲನು ತನ್ನ ಕೈಯ ಕೋಲಿನಿಂದ ಅಲ್ಲಿದ್ದ ಕಾವಲಿನವರನ್ನು ಹೊಡೆದು ಚೆದರಿಸಿದನು, ದ್ವಾರದ ಬಾಗಿಲನ್ನು ಮುರಿದು ಕೆಡವಿದನು, ಮಲ್ಲಿಕಾ ಸಹಿತನಾಗಿ ಪುಷ್ಕರಿಣಿಯನ್ನು ಪ್ರವೇಶಿಸಿದನು.

ಮಲ್ಲಿಕಾ ಈಜಾಡಿದಳು, ನೀರು ಕುಡಿದಳು. ಅವಳ ಬಯಕೆ ಈಡೇರಿತು. ಬಂಧುಲನು ತಾನೂ ನೀರಿಗಿಳಿದನು, ಪತ್ನಿಯೊಡನೆ ಜಲ

ಕೇಳಿಯಾಡಿದನು. ಅನಂತರ ಇಬ್ಬರೂ ಬಂದ ರಥದಲ್ಲಿ, ಬಂದ ದಾರಿಯಿಂದ, ಶ್ರಾವಸ್ತಿಗೆ ಹೊರಟರು.

ಇಷ್ಟು ಹೊತ್ತಿಗೆ, ಬಂಧುಲನ ಕೈಯಲ್ಲಿ ಏಟು ತಿಂದು ಓಡಿ ಹೋಗಿದ್ದ ಕಾವಲುಗಾರರು ನಡೆದದ್ದನ್ನೆಲ್ಲಾ ತಮ್ಮ ಒಡೆಯರಾದ ಲಿಚ್ಛವಿಗಳಿಗೆ ವರದಿ ಮಾಡಿದರು. ಲಿಚ್ಛವಿಗಳು ರೋಷಾವೇಶದಿಂದ ತಮ್ಮ ರಥಗಳನ್ನು ಏರಿಕೊಂಡು ಬಂಧುಲನ ಬೆನ್ನು ಹತ್ತಿದರು.

"ಬಂಧುಲನನ್ನೂ ಮಲ್ಲಿಕೆಯನ್ನೂ ಸಂಹಾರಮಾಡಿಬಿಡುತ್ತೇವೆ." ಎಂದು ಕೂಗಿಕೊಂಡು ಹೊರಟರು.

ಮಹಾದ್ವಾರದ ಬಳಿಯಲ್ಲಿ ಮಹಾಲಿ ಅವರನ್ನು ತಡೆದು, "ಬೇಡಿ, ಹೋಗಬೇಡಿ. ನೀವು ಪ್ರತಿಯೊಬ್ಬರೂ ಅವನ ಕೈಯಲ್ಲಿ ಹತರಾಗುತ್ತೀರಿ." ಎಂದು ಹೇಳಿದನು.

"ಏನಾದರೂ ಆಗಲಿ. ನಾವು ಹೋಗುವುದೇ ಖಂಡಿತ." ಎಂದು ಅವರು ಹಠ ಹಿಡಿದರು.

ಆಗ ಮಹಾಲಿ ಹೇಳಿದ: "ಹಾಗಾದರೆ, ನೀವು ಹೋಗಿಯೇತೀರುವೆವೆಂದು ಹಠ ಹಿಡಿದರೆ, ನನ್ನ ಈ ಮಾತು ಮರೆಯದಿರಿ: ಅವನ ರಥದ ಚಕ್ರ ನೆಲದಲ್ಲಿ ನಾಭಿಯತನಕ ಹೂತುಕೊಂಡದ್ದನ್ನು ಕಂಡ ಕೂಡಲೆ, ನೀವು ಹಿಂದಿರುಗಿ ಬಂದಿರೋ, ಬದುಕಿಕೊಳ್ಳುತ್ತೀರಿ. ನೀವು ತಿರುಗದೆ ಹೋದರೆ, ಸಿಡಿಲು ಬಂದು ಹೊಡೆದ ಹಾಗೆ ಒಂದು ಮಹಾಶಬ್ದ ಕೇಳಿಬರುತ್ತದೆ. ಅದು ಕೇಳಿಬಂದಾಗಲಾದರೂ ನೀವು ಹಿಂದಿರುಗಿದಿರೋ. ಬದುಕಿಕೊಳ್ಳುತ್ತೀರಿ. ಆಗಲೂ ಹಿಂದಿರುಗದೆ ಹೋದರೆ, ನಿಮ್ಮ ರಥಗಳ ನೊಗಗಳ ಮಧ್ಯೆ ಒಂದು ರಂಧ್ರ ಕಾಣಿಸಿಕೊಳ್ಳುತ್ತದೆ. ಆಗಲಾದರೂ ನೀವು ನಿಂತು ಹಿಂದಿರುಗದಿದ್ದರೆ, ನೀವು ಯಾರೊಬ್ಬರೂ ಬದುಕಿಬರುವಂತಿಲ್ಲ."

ಆ ದಿವಸ ಮೃತ್ಯುವಿನ ಮುಖವನ್ನು ಪ್ರವೇಶಿಸಬೇಕೆಂದು ಅವರಿಗೆ ವಿಧಿ ನಿಯಮಿಸಿತ್ತು. ಆದರಿಂದಾಗಿ ಆವರು ಮಹಾಲಿಯ ಹಿತವಚನಗಳಿಗೆ ಲಕ್ಷ್ಯಕೊಡದೆ, ಬಂಧುಲನನ್ನು ಅಟ್ಟಿಸಿಕೊಂಡು ಹೋದರು.

ಲಿಚ್ಛವಿಗಳು ದೃಷ್ಟಿಗೋಚರಕ್ಕೆ ಬಂದಾಗ, "ಅವರ ರಥಗಳು ಕಣ್ಣಳತೆಗೆ ಬಂದುವು, ಬಂಧುಲ!" ಎಂದಳು, ಮಲ್ಲಿಕಾ.

"ಒಳ್ಳೆಯದು, ಮಲ್ಲಿಕಾ. ಅವರ ರಥಗಳೆಲ್ಲ ಒಂದು ಪಂಕ್ತಿಯಾಗಿ, ಒಂದೇ ರಥವೆಂಬಂತೆ ಆದಾಗ, ಹೇಳು, ಮಲ್ಲಿಕಾ."

ಸ್ವಲ್ಪ ಹೊತ್ತಾದ ಮೇಲೆ ಮಲ್ಲಿಕಾ ಎಂದಳು : "ಈಗ, ಬಂಧುಲ, ಆ ರಥಗಳೆಲ್ಲಾ ಒಂದು ಪಂಕ್ತಿಯಾಗಿ, ಒಂದೇ ರಥದಂತೆ ಕಾಣಿಸುತ್ತಿದೆ."

"ಹಾಗಾದರೆ, ಇದೋ, ಈ ಕುದುರೆಯ ಹಗ್ಗಗಳನ್ನು ಹಿಡಿ" ಎಂದು ಬಂಧುಲನು ಅದನ್ನು ಹೆಂಡತಿಯ ಕೈಗೆ ಒಪ್ಪಿಸಿ, ತಾನು ರಥದ ಮಧ್ಯೆ ನಿಂತು, ತನ್ನ ಬಿಲ್ಲನ್ನು ಮೇಲೆತ್ತಿದನು.

ಆ ಕೂಡಲೇ ಅವನ ರಥದ ಚಕ್ರಗಳು ನಾಭಿಯವರೆಗೂ ನೆಲದಲ್ಲಿ ಹೂತುವು. ಅದನ್ನು ಕಂಡರೂ ಲಿಚ್ಛವಿಗಳು ನಿಲ್ಲಲಿಲ್ಲ, ಮುಂದೆ ಬಂದರು. ಚಕ್ರ ಹೂತರೂ ರಥ ಮುಂದುವರಿಯುತ್ತಿತ್ತು.

ಬಂಧುಲನು ತನ್ನ ಬಿಲ್ಲಿನ ಹೆದೆಯನ್ನು ಮಿಡಿದನು. ಅದರ ಠಂಕಾರವು ಸಿಡಿಲಿನ ಶಬ್ದದ ಹಾಗಿತ್ತು. ಆದರೂ ಲಿಚ್ಛವಿಗಳು ನಿಲ್ಲಲಿಲ್ಲ, ಹಿಂದಿರುಗಲಿಲ್ಲ.

ಆಗ ಬಂಧುಲನು ಒಂದು ಮಹಾ ಸಮರ್ಥವಾದ ಬಾಣವನ್ನು ತನ್ನ ಬಿಲ್ಲಿಗೆ ಹೂಡಿ, ಬಿಟ್ಟನು. ಆ ಬಾಣವು ಎದುರಿಗೆ ಇದ್ದವರ ರಥಗಳ ನೊಗಗಳನ್ನು ತೂರಿಕೊಂಡು, ಅವರ ನಡುಪಟ್ಟಿಯ ಪ್ರದೇಶ ವನ್ನು ಪ್ರವೇಶಿಸಿ, ಹೋಗಿ ನೆಲದೊಳಗೆ ಅಡಗಿತು.

ಬಾಣವು ತಮ್ಮ ಮೈಯನ್ನು ಪ್ರವೇಶಿಸಿತು ಎಂಬುದರ ಅರಿವೇ ಇಲ್ಲದೆ, ಲಿಚ್ಛವಿಗಳು ಬಂಧುಲನ ಬೆನ್ನಟ್ಟಿ ಬರುತ್ತಾ "ನಿಲ್ಲು! ನಿಲ್ಲು! ಓಡಬೇಡ!" ಎಂದು ಕೂಗಿಕೊಂಡರು.

ಬಂಧುಲನು ತನ್ನ ರಥವನ್ನು ನಿಲ್ಲಿಸಿ, "ಛಿ! ಸತ್ತವರೊಡನೆ ನನಗೆ ಏನು ಕಾಳಗ?" ಎಂದು ನಕ್ಕನು.

ಲಿಚ್ಛವಿಗಳು "ನಿನಗೆ ಭೀತಿಯಿಂದ ಬುದ್ಧಿ ಕೆಟ್ಟಿರಬೇಕು. ನಾವು ಸತ್ತವರಂತೆ ನಿನ್ನ ಕಣ್ಣಿಗೆ ಕಾಣುವೆವೇನು?" ಎಂದರು.

"ನೀವು ಇನ್ನೂ ಬದುಕಿರುವೆವು ಎಂದುಕೊಂಡಿದ್ದರೆ, ನಿಮ್ಮಲ್ಲಿ ಯಾರಾದರೂ ನಿಮ್ಮ ನಡುಪಟ್ಟಿಯನ್ನು ಸಡಿಲಿಸಿ ನೋಡಿರಿ." ಎಂದ, ಬಂಧುಲ.

ಒಬ್ಬನು ತನ್ನ ನಡುಪಟ್ಟಿಯನ್ನು ಸಡಿಲಿಸಿದನು. ಒಳಗಿನ ಗಾಯದಿಂದ ರಕ್ತ ಪ್ರವಹಿಸಿ, ಅವನು ಸತ್ತುಬಿದ್ದನು.

ಆಗ ಬಂಧುಲ ಹೇಳಿದ: "ನೀವೆಲ್ಲರೂ ಆ ಒಬ್ಬನು ಹೇಗೋ ಹಾಗೆಯೇ ಇದ್ದೀರಿ. ಆದ್ದರಿಂದ ನಿಮ್ಮ ಕವಚಗಳನ್ನು ಇಲ್ಲಿ ಕಳೆಯಬೇಡಿರಿ. ನಿಮ್ಮ ಮನೆಗಳಿಗೆ ಹೋಗಿ, ತಾಯಿತಂದೆಯರಿಗೂ, ಹೆಂಡತಿಮಕ್ಕಳಿಗೂ ಹೇಳಬೇಕಾದ್ದನ್ನು ಹೇಳಿ, ಗೃಹಕೃತ್ಯಗಳನ್ನು ನೇರ್ಪುಗೊಳಿಸಿ, ಮನೆಯಲ್ಲೆ ಪ್ರಾಣಬಿಡಿ, ಹೋಗಿ."

ಲಿಚ್ಛವಿಗಳು ಮೃತ್ಯುವನ್ನು ಎದುರುಗೊಳ್ಳಲು ಮನೆಯ ಕಡೆಗೆ ಹಿಂದಿರುಗಿದರು. ಬಂಧುಲನು ಮಲ್ಲಿಕೆಯನ್ನು ಶ್ರಾವಸ್ತಿಗೆ ಸ್ವಸ್ತವಾಗಿ ಒಯ್ದನು.

ಮಲ್ಲಿಕಾ ಆ ಸಲ ಅವಳಿ ಮಕ್ಕಳನ್ನು ಹೆತ್ತಳು. ಅನಂತರವೂ ಅವಳಿಗೆ ಅನೇಕ ಗಂಡುಮಕ್ಕಳಾದರು. ಅವರೆಲ್ಲರೂ ವೀರರಾಗಿ ಶೂರರಾಗಿ ಧೀರರಾಗಿ ಬೆಳೆದು ಹೆಸರಾದರು, ಶಸ್ತ್ರಾಸ್ತ್ರಗಳನ್ನು ಬಳಸುವುದರಲ್ಲಿ ಸಮರ್ಥರಾದರು. ಬಂಧುಲನು ಅರಮನೆಗೆ ಹೋಗುವಾಗಲೆಲ್ಲಾ ಬುದ್ಧಿವಂತರಾದ ಅವನ ಮಕ್ಕಳೂ ಅವನ ಜೊತೆಗೆ ಹೋಗಿಬರುವರು.

ಒಂದು ಸಲ, ಅರಸನ ಆಸ್ಥಾನದಲ್ಲಿ ನ್ಯಾಯವನ್ನು ಬೇಡಿಕೊಂಡು ಹೋಗಿದ್ದವರು ಯಾರೋ, ಧರ್ಮಾಧಿಕರಣರಿಂದ ಅನ್ಯಾಯವನ್ನು ಪಡೆದವರಾಗಿ ಗೋಳಾಡಿಕೊಂಡು ಬರುತ್ತಿದ್ದರು. ಬಂಧುಲನು ಅವರ ಗೋಳು ಏನೆಂದು ವಿಚಾರಿಸಿದ. ಅವರ ಪರವಾಗಿ ಮತ್ತೆ ವಾದಮಾಡಿ, ಅವರಿಗೆ ನ್ಯಾಯವನ್ನು ದೊರಕಿಸಿಕೊಟ್ಟ. ಅಲ್ಲಿ ಸೇರಿದ್ದ ಜನರೆಲ್ಲ ಸಾಧುಕಾರ ಮಾಡಿ, ಜಯಕಾರಮಾಡಿ, ತಮ್ಮ ಸಂತೋಷವನ್ನು ಸೂಚಿಸಿದರು.

ಆ ಸಾಧುಕಾರಗಳ, ಜಯಕಾರಗಳ ಮಹಾಧ್ವನಿ ಪ್ರಸೇನಜಿತನ ಕಿವಿಗೆ ಬಿತ್ತು. ಆ ಮಹಾಧ್ವನಿಗೆ ಕಾರಣವೇನೆಂದು ವಿಚಾರಿಸಿದ. ಧರ್ಮಾಧಿಕರಣರ ಆಸ್ಥಾನದಲ್ಲಿ ನಡೆದದ್ದನ್ನೆಲ್ಲ ಪರಿವಾರದವರು ತಿಳಿಸಿದರು. ಬಂಧುಲನ ಧರ್ಮಬುದ್ಧಿಯನ್ನು ದೊರೆ ಬಹುವಾಗಿ ಮೆಚ್ಚಿಕೊಂಡು, ಧರ್ಮಾಧಿಕರಣರ ಗೋಷ್ಠಿಗೆ ಅವನನ್ನೇ ಮುಖಂಡನನ್ನಾಗಿ

ನೇಮಿಸಿದನು. ಅಂದಿನಿಂದ ಬಂಧುಲನ ಖ್ಯಾತಿ ಇನ್ನಷ್ಟು ಅಧಿಕ ವಾಯಿತು.

ಬಂಧುಲನು ಬಂದ ಮೇಲೆ, ಆ ಹಿಂದಿನ ಧರ್ಮಾಧಿಕರಣರ ಅನ್ಯಾಯಗಳಿಗೆ ಅವಕಾಶವಿಲ್ಲದೆ ಹೋಯಿತು. ಅದರಿಂದ ಅವರು ಅರಸನ ಹತ್ತಿರ ಚಾಡಿ ಹೇಳತೊಡಗಿದರು. "ಬಂಧುಲನು ಪ್ರಜೆಗಳನ್ನೆಲ್ಲಾ ತನ್ನ ಕಡೆಗೆ ಒಲಿಸಿಕೊಂಡು, ತಾನೇ ರಾಜನಾಗಬೇಕೆಂದು ತಂತ್ರಮಾಡುತ್ತಿದ್ದಾನೆ." ಎಂದರು.

ದೊರೆ, ತಿಳಿವಳಿಕೆ ಸಾಲದೆ, ಅವರ ಮಾತನ್ನು ನಂಬಿದನು. ತನ್ನ ರಾಜತ್ವಕ್ಕೆ ಎಲ್ಲಿ ಚ್ಯುತಿ ಬರುವುದೋ ಎಂದು ಹೆದರಿದನು. ಆ ಹೆದರಿಕೆಯಿಂದಲೇ ಅವನಿಗೆ ಬಂಧುಲನ ಮೇಲೆ ಕುರುಡು ಕುರುಡಾದ ಕ್ರೋಧವುಂಟಾಯಿತು. ಬಂಧುಲನು ಕೊಲೆಯಾದ ಹೊರತು ತನಗೆ ಕ್ಷೇಮವಿಲ್ಲ, ಎನ್ನಿಸಿತು. ಆದರೂ, ಬಂಧುಲನನ್ನು ಎಲ್ಲರೆದುರಿಗೂ ಕೊಲ್ಲಿಸುವುದಕ್ಕೆ ಅವನಿಗೆ ಧೈರ್ಯ ಸಾಲದು. ಆದರಿಂದಾಗಿ ಕಪಟೋಪಾಯವನ್ನು ಆಶ್ರಯಿಸಿದನು.

ಬಂಧುಲನನ್ನು ಕರೆಸಿ, "ಬಂಧುಲ! ನಮ್ಮ ರಾಜ್ಯದ ಗಡಿಯಬಳಿ ಅನಾಯಕವಾಗಿದೆಯಂತೆ. ಕಳ್ಳಕಾಕರ ಬಾಧೆ ಅತಿಯಾಗಿದೆಯಂತೆ. ಅಲ್ಲಿಗೆ ಹೋಗಿ, ಅವರನ್ನು ಶಿಕ್ಷಿಸಿ ಬಾ." ಎಂದು ಅವನ ಜೊತೆಯಲ್ಲಿ ಒಂದು ಸಣ್ಣ ಸೇನೆಯನ್ನು ಕಳುಹಿಸಿದನು.

ಆ ಸೇನೆಯ ಮುಖಂಡರಿಗೆ ಹೇಳಿದ: "ಸಮಯ ನೋಡಿಕೊಂಡಿದ್ದು, ಈ ಬಂಧುಲನಿಗೂ ಇವನ ಮಕ್ಕಳಿಗೂ ತಲೆ ಕತ್ತರಿಸಿಬಿಡಿ."

ಬಂಧುಲನು ಬಂದನೆಂಬ ವಾರ್ತೆಯನ್ನು ಕೇಳಿಯೇ ಗಡಿಯ ಬಳಿಯಣ ಅನಾಯಕತೆ ಅಡಗಿಹೋಯಿತು, ಕಳ್ಳಕಾಕರು ಚೆದರಿ ಹೋದರು. ಬಂಧುಲನು ಅಲ್ಲಿನ ಸ್ಥಿತಿಗತಿಗಳನ್ನೆಲ್ಲ ಒಂದು ವ್ಯವಸ್ಥೆಗೆ ತಂದು, ಶ್ರಾವಸ್ತಿಗೆ ಹಿಂದಿರುಗಿ ಬರುವಾಗ, ನಗರದ ಹೊರಗೆ ಅವನ ಕೊಲೆಯಾಗಿಹೋಯಿತು. ಅರಸನು ನೇಮಿಸಿದ್ದ ಸೈನಿಕರು ಅವನ ತಲೆಯನ್ನೂ ಅವನ ಮಕ್ಕಳ ತಲೆಗಳನ್ನೂ ಕಡಿದುಬಿಟ್ಟರು.

ಈ ಕಡೆ ಬಂಧುಲನ, ಮತ್ತು ಅವನ ಮಕ್ಕಳ ಕೊಲೆಯಾಗುತ್ತಿದ್ದ ಅದೇ ಹೊತ್ತಿನಲ್ಲಿಯೇ ಆ ಕಡೆ ಮಲ್ಲಿಕಾ ತನ್ನ ಮನೆಗೆ ಸಾರಿಪುತ್ರ ಮಹಾಮೌದ್ಗಲ್ಯಾಯನರನ್ನು ಭಿಕ್ಷೆಗೆ ಕರೆದು, ಅವರ ಪಾತ್ರೆಗಳನ್ನು ಮೃದುವಾದ ಆಹಾರಗಳಿಂದ ತುಂಬುತ್ತಿದ್ದಳು.

ಆ ಹೊತ್ತಿಗೆ ಸರಿಯಾಗಿ ಅವಳ ಕೈಗೆ ಒಂದು ಓಲೆ ಬಂತು. ಅದರ ಒಕ್ಕಣೆ ಬಂಧುಲನ ಕೊಲೆಯನ್ನೂ ಅವನ ಮಕ್ಕಳ ಕೊಲೆಯನ್ನೂ ಸಾರಿ ಹೇಳಿತು. ಮಲ್ಲಿಕಾ, ಮನಸ್ಸಿನಲ್ಲಿ ಏನೇ ವಿಕಾರ ಆಗಿರಬಹುದಾದರೂ, ಮಾತಿನಿಂದಾಗಲಿ ಮುಖಚರ್ಯೆಯಿಂದಾಗಲಿ ಏನೂ ವಿಕಾರವನ್ನು ತೋರ್ಪಡಿಸಲಿಲ್ಲ. ಬಂದ ಓಲೆಯನ್ನು ಹಾಗೇ ಒಟ್ಟೆಯ ಸೆರಗಿನಲ್ಲಿ ಕಟ್ಟಿಕೊಂಡು, ಭಿಕ್ಷುಗಳ ಪರಿಚರ್ಯೆಯಲ್ಲಿ ನಿರತಳಾಗಿದ್ದಳು.

ಆಗ, ಆ ಮನೆಯವಳು ಒಬ್ಬಾನೊಬ್ಬ ದಾಸಿ ತುಪ್ಪ ತುಂಬಿದ ಪಾತ್ರೆಯನ್ನು ತರುತ್ತಿರುವಾಗ, ಅದು ಕೈಯಿಂದ ಜಾರಿ ಬಿದ್ದು ಒಡೆದು ಹೋಯಿತು.

ಅದನ್ನು ಕಂಡು, ಧರ್ಮಸೇನಾಪತಿ ಎನ್ನಿಸಿದ ಸಾರಿಪುತ್ರನು ಹೇಳಿದನು: "ಯಾವುದಕ್ಕೆ ಬಿದ್ದು ಒಡೆದುಹೋಗುವುದೇ ಸ್ವಭಾವವಾದ ಗುಣವೋ ಅದು ಬಿದ್ದು ಒಡೆದುಹೋದರೆ, ಅದಕ್ಕಾಗಿ ಚಿಂತೆ ಪಡತಕ್ಕದ್ದಲ್ಲ." ಎಂದು ಹೇಳುತ್ತಾ, ಮಲ್ಲಿಕಾದೇವಿಯ ಕಡೆಗೆ ನೋಡಿದನು.

ಆಗ ಮಲ್ಲಿಕಾ ತನ್ನ ವಸ್ತ್ರದ ಕೊನೆಯಿಂದ ತಾನು ಕಟ್ಟಿರಿಸಿದ ಓಲೆಯನ್ನು ತೆಗೆದು, ಹೇಳಿದಳು: "ಈಗ ತಾನೆ ಈ ಓಲೆಯನ್ನು ತಂದು ಕೊಟ್ಟರು. ನನ್ನ ಬಂಧುಲನೂ ನನ್ನ ಮಕ್ಕಳೂ ಕೊಲೆಯಾಗಿರುವರಂತೆ. ಅದನ್ನು ತಿಳಿದಾಗಲೇ ನಾನು ಚಿಂತೆಪಡಲಿಲ್ಲ. ಈಗ ಈ ತುಪ್ಪದ ಗಡಿಗೆ ಒಡೆದದ್ದಕ್ಕೆ ಚಿಂತೆಪಡಲೆ?"

ಧರ್ಮಸೇನಾಪತಿಯು ಅವಳ ಸ್ಥೈರ್ಯವನ್ನು ಪ್ರಶಂಸಿಸಿ, ಮನುಷ್ಯನ ಬದುಕಿನ ಕ್ಷಣಿಕತೆಯನ್ನು ಕುರಿತು ಧರ್ಮಬೋಧನೆ ಮಾಡಿದನು. ಮಾಡಿಯಾದ ಮೇಲೆ, ತನ್ನ ಭಿಕ್ಷುಗಳ ಸಂಘದೊಡನೆ, ವಿಹಾರಕ್ಕೆ ತೆರಳಿದನು

ಅನಂತರ ಮಲ್ಲಿಕಾ ತನ್ನ ಸೊಸೆಯರನ್ನು ಕರೆದಳು: "ಮಕ್ಕಳಿರಾ, ನಿಮ್ಮ ಗಂಡಂದಿರು ನಿರ್ದೋಷಿಗಳು. ಯಾವ ಹಿಂದಿನ ಜನ್ಮದ ಪಾಪದ

ಫಲವೋ, ಈ ಜನ್ಮದಲ್ಲಿ ಹೀಗೆ ಮರಣಪಟ್ಟಿದ್ದಾರೆ. ಅವರ ಮರಣಕ್ಕೆ ಸದ್ಯಃ ಕಾರಣನಾದ ಈ ದೊರೆಯ ಮೇಲೆ ವೈರವನ್ನು ತಾಳಬೇಡಿ." ಎಂದು ಬುದ್ಧಿ ಹೇಳಿದಳು.

"ದೊರೆ ನಮಗೆ ಏನೇ ಅನ್ಯಾಯ ಮಾಡಿದ್ದರೂ, ನಾವು ಅವನನ್ನು ಮನಃಪೂರ್ವಕವಾಗಿ ಮನ್ನಿಸುತ್ತೇವೆ." ಎಂದು ಆ ಸೊಸೆಯರು ಅತ್ತೆಯ ಮಾತಿಗೆ ಅನುಮೋದಿಸಿದರು.

ಆ ಅತ್ತೆಸೊಸೆಯರು ಮಾತನಾಡಿಕೊಂಡದ್ದನ್ನು ಕೇಳಿಸಿಕೊಂಡ ಗೂಢಚಾರರು ತಾವು ಕೇಳಿದ್ದನ್ನು ಅರಸನಿಗೆ ವರದಿಮಾಡಿದರು. ಅವರ ಕ್ಷಮೆಯಿಂದ ಅರಸನಿಗೆ ಪಶ್ಚಾತ್ತಾಪವುಂಟಾಯಿತು. ಕೂಡಲೇ ತಾನೇ ಮಲ್ಲಿಕೆಯ ಮಹಮನೆಗೆ ಬಂದು. "ತಿಳಿಯದೆ ನಾನು ಘೋರವಾದ ತಪ್ಪು ಮಾಡಿದ್ದೇನೆ. ಇದಕ್ಕೆ ಏನು ಪರಿಹಾರ ಮಾಡಬೇಕಾದರೂ ನಾನು ಸಿದ್ಧನಾಗಿದ್ದೇನೆ. ನೀವು ಏನು ಕೇಳಿದರೂ, ಅದು ನನ್ನ ಮೇಲೆ ಅನುಗ್ರಹಮಾಡಿದಂತೆ." ಎಂದು ಅಂಗಲಾಚಿ ಬೇಡಿಕೊಂಡನು. ಮಲ್ಲಿಕಾ ದೊರೆಯನ್ನು ಸಮಾಧಾನಪಡಿಸಲು ಸೂಕ್ತವಾದ ಮಾತುಗಳನ್ನಾಡಿ, ಅವನನ್ನು ಕಳಿಸಿಕೊಟ್ಟಳು.

ದೊರೆಯನ್ನು ಕಳಿಸಿಕೊಟ್ಟಮೇಲೆ, ಮಲ್ಲಿಕಾ, ಸತ್ತವರ ಶಾಂತಿಗಾಗಿ ಅನ್ನದಾನಮಾಡಿ, ತಾನು ಮತ್ತೆ ಸ್ನಾನಮಾಡಿ, ಶುಚಿಯಾಗಿ ಅರಸನ ಮನೆಯನ್ನು ಹೊಕ್ಕು, ಹೇಳಿದಳು:

"ಮಹಾರಾಜ, ನಾವು ಏನು ಕೇಳಿದರೂ ಅದನ್ನು ನಡಸಿಕೊಡುವುದಾಗಿ ನೀನು ಮಾತುಕೊಟ್ಟೆ. ನಾವು ನಿನ್ನನ್ನು ಕೇಳುವುದು ಇಷ್ಟೆ: ನಾನೂ ನನ್ನ ಸೊಸೆಯರೂ ನಮ್ಮ ನಮ್ಮ ತವರುಮನೆಗಳಿಗೆ ಹೋಗುವುದಕ್ಕೆ ನಮಗೆ ಅಪ್ಪಣೆ ಕೊಡಬೇಕು."

ದೊರೆ ಅವಳ ಕೋರಿಕೆಗೆ ಒಪ್ಪಿದನು. ಮಲ್ಲಿಕೆಯ ಸೊಸೆಯರೆಲ್ಲರೂ ತಮ್ಮ ತಮ್ಮ ತವರುಮನೆಗಳಿಗೆ ಹೊರಟುಹೋದರು. ಮಲ್ಲಿಕಾ ತಾನೂ ಕುಶಿನಾರಾ ನಗರದಲ್ಲಿದ್ದ ತನ್ನ ತವರುಮನೆಗೆ ಹೋದಳು.

— ೪ —

ಸೇನಾಪತಿಯಾಗಿದ್ದ ಬಂಧುಲನ ಸ್ಥಾನಕ್ಕೆ, ದೊರೆ ಪ್ರಸೇನಜಿತನು, ಅವನ ಸೋದರಳಿಯನಾದ ದೀರ್ಘಕಾರಾಯಣನನ್ನು ನೇಮಿಸಿದನು. ಇದನ್ನು ತನಗಾದ ಅನುಗ್ರಹವೆಂದು ದೀರ್ಘಕಾರಾಯಣ ಭಾವಿಸಲಿಲ್ಲ. "ದೊರೆ ಅನ್ಯಾಯದಿಂದ ನನ್ನ ಸೋದರಮಾವನನ್ನು ಕೊಲ್ಲಿಸಿಬಿಟ್ಟ" ಎಂದು ಊರಲ್ಲೆಲ್ಲ ಸಿಕ್ಕಿದ ಕಡೆ ಪ್ರಸೇನಜಿತನನ್ನು ನಿಂದಿಸುತ್ತಿದ್ದನು.

ದೊರೆಗಾದರೂ, ಬಂಧುಲನನ್ನು ಕೊಲ್ಲಿಸಿದ ಆ ದಿವಸದಿಂದ ತೊಡಗಿ ಮನಸ್ಸಿಗೆ ನೆಮ್ಮದಿಯಿಲ್ಲ. ಪಶ್ಚಾತ್ತಾಪದಿಂದ ನರಳಿಹೋದ ಅವನಿಗೆ ಅನ್ನ ಸೇರದು, ನಿದ್ರೆಬಾರದು. ತನ್ನ ರಾಜ್ಯದಲ್ಲಿಯೇ ಅವನಿಗೆ ಜುಗುಪ್ಸೆ ಹುಟ್ಟಿತು.

ಆಗ ಯಾರೋ ಅವನಿಗೆ ನಿವೇದಿಸಿದರು: "ಭಗವಂತನಾದ ಬುದ್ಧನು ಉಳುಂಪಾ ಎಂಬ ಶಾಕ್ಯರ ಗ್ರಾಮದಲ್ಲಿ ಬೀಡು ಬಿಟ್ಟಿದ್ದಾನೆ. ಭಗವಂತನ ಧರ್ಮಕಥನದಿಂದ ದೊರೆಯ ಮನಸ್ಸಿಗೆ ನೆಮ್ಮದಿ ದೊರಕೀತು."

ದೊರೆ ಆ ಮಾತಿನಿಂದ ಸಮಾಧಾನ ಹೊಂದಿ, ಸಣ್ಣದೊಂದು ಪರಿವಾರವನ್ನು ಕರೆದುಕೊಂಡು ಭಗವಂತನು ತಂಗಿದ್ದ ವನಪ್ರದೇಶಕ್ಕೆ ಪ್ರಯಾಣಮಾಡಿದನು. ಭಗವಂತನು ತಂಗಿದ್ದ ಎಡೆಗೆ ಸಮೀಪ ಬಂದಾಗ, ಸೌಮ್ಯವೇಷದಿಂದ ಸಂದರ್ಶಿಸುವುದು ಸರಿಯೆಂಬ ಸಮುದಾಚಾರವನ್ನು ತಿಳಿದವನಾದದ್ದರಿಂದ, ಪ್ರಸೇನಜಿತ ರಾಜನು ತನ್ನ ಛತ್ರ ಚಾಮರ ಕಿರೀಟ ಖಡ್ಗ ಮುದ್ರೆ ಮೊದಲಾದ ರಾಜಚಿಹ್ನೆಗಳನ್ನೆಲ್ಲ ದೀರ್ಘಕಾರಾಯಣನ ಕೈಯಲ್ಲಿ ಒಪ್ಪಿಸಿ, ತಾನು ಒಬ್ಬನೇ ನಿಶ್ಶಂಕೆಯಿಂದ ಭಗವಂತನ ಗಂಧಕುಟಿಯನ್ನು ಪ್ರವೇಶಿಸಿದನು.

ಆ ಕಡೆ ಪ್ರಸೇನಜಿತನು ಭಗವಂತನ ಸನ್ನಿಧಿಗೆ ಹೋದನೋ ಇಲ್ಲವೋ, ಈ ಕಡೆ ದೀರ್ಘಕಾರಾಯಣನು ದೊರೆ ತನ್ನ ಕೈಗೆ ಒಪ್ಪಿಸಿದ್ದ ರಾಜಚಿಹ್ನೆಗಳನ್ನು ತೆಗೆದುಕೊಂಡು ಶ್ರಾವಸ್ತಿಗೆ ಬಂದು, ಅಲ್ಲಿ ವಿಡೂಡಭನಿಗೆ ರಾಜನ ಅಭಿಷೇಕ ಮಾಡಿದನು. ತಾನು ಹೊರಟದ್ದು ದೊರೆಗೆ ತಿಳಿಯುವುದಕ್ಕಾಗಿ ಒಬ್ಬ ದಾಸಿಯನ್ನು ಅಲ್ಲೇ ನಿಲ್ಲಿಸಿ, ದೊರೆಗಾಗಿ ಒಂದು ಕುದುರೆಯನ್ನು ಬಿಟ್ಟುಹೋದನು.

ದೊರೆ ಭಗವಂತನ ಹತ್ತಿರ ಎಷ್ಟು ಹೊತ್ತು ಮಾತನಾಡಬೇಕೋ ಅಷ್ಟು ಹೊತ್ತು ಮಾತನಾಡಿಯಾದ ಮೇಲೆ, ಹೊರಗೆ ತಾನು ಪಾಳಯವನ್ನು ಬಿಟ್ಟಿದ್ದ ಕಡೆಗೆ ಬಂದು ನೋಡಿದನು. ಅಲ್ಲಿದ್ದ ದಾಸಿ ದೀರ್ಘಕಾರಾಯಣನ ದ್ರೋಹದ ಕತೆಯನ್ನು ಹೇಳಿದಳು.

"ನಾನು ನನ್ನ ಸೋದರಳಿಯನಾದ ಅಜಾತಶತ್ರುವಿನ ಸಹಾಯವನ್ನು ಪಡೆದು ಈ ವಿಡೂಡಭನನ್ನು ಸೆರೆ ಹಿಡಿಯುತ್ತೇನೆ" ಎಂದುಕೊಂಡು, ಪ್ರಸೇನಜಿತನು ತನಗಾಗಿ ಕಾರಾಯಣನು ಬಿಟ್ಟುಹೋಗಿದ್ದ ಕುದುರೆಯನ್ನು ಏರಿಕೊಂಡು, ರಾಜಗೃಹಕ್ಕೆ ದೌಡು ಓಡಿದನು.

ಪ್ರಸೇನಜಿತನು ರಾಜಗೃಹವನ್ನು ಮುಟ್ಟುವ ವೇಳೆಗೆ ಸಂಧ್ಯಾಸಮಯ ಮೀರಿಹೋಗಿ, ಕೋಟೆಯ ಹೆಬ್ಬಾಗಿಲುಗಳನ್ನು ಮುಚ್ಚಿಬಿಟ್ಟಿದ್ದರು. ಪ್ರಯಾಣದ ದೀರ್ಘಾಯಾಸದಿಂದ ಬಳಲಿಹೋಗಿದ್ದ ಪ್ರಸೇನಜಿತನು ಕೋಟೆಯ ಹೊರಗಿನ ಸತ್ರವೊಂದರಲ್ಲಿ ವಿಶ್ರಾಂತಿಗಾಗಿ ಮಲಗಿ, ಅಲ್ಲಿಯೇ ಅದೇ ರಾತ್ರಿಯೇ ತೀರಿಕೊಂಡನು.

ಬೆಳಗುಬಿಡುವ ಹೊತ್ತಿಗೆ ದೊರೆಯ ಮರಣವನ್ನು ಜೊತೆಗೆ ಬಂದ ಆ ದಾಸಿ ಅರಿತಳು. ಸುದ್ದಿ ಕೋಸಲಕ್ಕೆ ಮುಟ್ಟಿತು. ಹೊಸ ದೊರೆಯಾದ ವಿಡೂಡಭ ಬಂದು, ಮಾಡಬೇಕಾದ ಉತ್ತರಕ್ರಿಯೆಗಳನ್ನು ಮಹಾರಾಜಯೋಗ್ಯವಾದ ವೈಭವದಿಂದ ನಡೆಸಿ ಮುಗಿಸಿದನು.

— ೫ —

ವಿಡೂಡಭನು ದೊರೆಯಾದ ಮೇಲೆ, ಶಾಕ್ಯರಲ್ಲಿ ಹಿಂದೆ ತನಗಾದ ಮುಯ್ಯನ್ನು ಜ್ಞಾಪಿಸಿಕೊಂಡನು. "ಈಗ ಈ ಶಾಕ್ಯರನ್ನು ನಿರ್ನಾಮವಾಗುವಂತೆ ಸಂಹಾರಮಾಡುತ್ತೇನೆ" ಎಂದು ಮಹಾ ಸೈನ್ಯಸಮೇತನಾಗಿ ಕಪಿಲವಸ್ತುವಿನ ಮೇಲೆ ದಂಡೆತ್ತಿಹೊರಟನು.

ಅದೇ ದಿನ ಬೆಳಗಿನ ಜಾವ, ಭಗವಂತನು ತನ್ನ ದಿವ್ಯಾವಲೋಕನದಿಂದ ಜಗತ್ತುಗಳನ್ನು ಪಾವನಮಾಡುತ್ತಾ, ವಿಡೂಡಭನು ತನ್ನ ಬಂಧುಗಳ ಹತ್ಯೆಗೆ ನಿಶ್ಚಯಿಸಿಕೊಂಡದ್ದನ್ನು ಕಂಡನು. "ಈ ನನ್ನ ಬಂಧು

ಗಳನ್ನು ನಾನು ಬದುಕಿಸುವುದು ತಕ್ಕದ್ದು" ಎಂದು ಚಿಂತಿಸಿದನು. ಆ ದಿನ ಪೂರ್ವಾಹ್ನದಲ್ಲಿ ಎಂದಿನಂತೆ ಭಿಕ್ಷಾಚರ್ಯೆಯನ್ನು ಮುಗಿಸಿ ಬಂದು, ಮಧ್ಯಾಹ್ನದ ಅನಂತರ ಗಂಧಕುಟಿಯಲ್ಲಿ ಸಿಂಹ ಮಲಗುವ ಹಾಗೆ ಬಲ ಮಗ್ಗುಲಾಗಿ ಸ್ವಲ್ಪ ಸಮಯ ಪವಡಿಸಿದ್ದು, ಅಪರಾಹ್ನದ ಹೊತ್ತಿಗೆ ತನ್ನ ಸಿದ್ಧಶಕ್ತಿಯಿಂದ ಕಪಿಲವಸ್ತುವಿನ ಕಡೆಗೆ ತೆರಳಿ, ಆ ಊರಿಗೆ ಅನತಿದೂರದಲ್ಲಿದ್ದ ಒಂದು ನೆರಳಿಲ್ಲದ ಮರದಡಿಯಲ್ಲಿ ವಿಡೂಡಭನು ಬರುವ ಮಾರ್ಗದಲ್ಲಿ ಕುಳಿತುಕೊಂಡನು. ಅಲ್ಲಿಗೆ ಸ್ವಲ್ಪ ದೂರದಲ್ಲಿಯೇ, ವಿಡೂಡಭನ ರಾಜ್ಯದ ಸೀಮೆಯ ಹತ್ತಿರದಲ್ಲಿಯೇ ಘನವಾದ ಛಾಯೆಯಿಂದ ಕಪ್ಪಾದ ಅಶ್ವತ್ಥವೃಕ್ಷವಿದ್ದರೂ ಭಗವಂತನು ಆ ನೆರಳಿಲ್ಲದ ಮರದ ಬುಡವನ್ನೇ ಆಶ್ರಯಿಸಿದನು.

ಮುತ್ತಿಗೆಗಾಗಿ ಸೇನಾಸಂಪತ್ತಿನೊಡನೆ ಬರುತ್ತಿದ್ದ ವಿಡೂಡಭನು ಭಗವಂತನನ್ನು ಕಂಡು, ಹತ್ತಿರ ಬಂದು, ಪ್ರಣಾಮಮಾಡಿ, ಹೇಳಿದನು: "ಭಗವನ್! ಈ ಬಿಸಿಲಿನಲ್ಲಿ ಈ ನೆರಳಿಲ್ಲದ ಮರದ ಬುಡದಲ್ಲಿ ಏಕೆ ಕುಳಿತಿದ್ದೀರಿ? ದಟ್ಟವಾದ ನೆರಳಿರುವ ಈ ಅಶ್ವತ್ಥದ ಅಡಿಯಲ್ಲಿ ಕುಳಿತುಕೊಳ್ಳಿರಿ."

"ನನಗಾಗಿ ನೀನು ಚಿಂತಿಸಬೇಡ, ಮಹಾರಾಜ. ನನ್ನ ಬಂಧುವರ್ಗದವರ ನೆರಳು ನನಗೆ ತಂಪು ನೀಡುತ್ತಿದೆ."

ಆಗ ವಿಡೂಡಭನಿಗೆ ಎನ್ನಿಸಿತು: "ಓಹೋ! ತನ್ನ ಬಂಧುವರ್ಗದವರನ್ನು ಸಂರಕ್ಷಿಸುವುದಕ್ಕಾಗಿ ಭಗವಂತನು ಇಲ್ಲಿಗೆ ಬಂದಹಾಗಿದೆ!"

ಭಗವಂತನು ಇರುವಾಗ ಶಾಕ್ಯರ ಮೇಲೆ ಬೀಳುವುದಕ್ಕೆ ವಿಡೂಡಭನಿಗೆ ಮನಸ್ಸು ಬರಲಿಲ್ಲ. ಭಗವಂತನಿಗೆ ಮತ್ತೆ ಅಂಜಲಿಯೊಪ್ಪಿಸಿ, ಸೇನೆಯನ್ನು ಕರೆದುಕೊಂಡು, ಶ್ರಾವಸ್ತಿಗೆ ಹಿಂದಿರುಗಿದನು.

ಅವನು ಹಿಂದಿರುಗಿದ ಮೇಲೆ, ಭಗವಂತನು ತಾನೂ ಎದ್ದು, ವಾಯುಮಾರ್ಗವಾಗಿ ಜೇತವನಕ್ಕೆ ಮರಳಿದನು.

ರಾಜಧಾನಿಗೆ ಹಿಂದಿರುಗಿದ ಕೆಲವು ದಿನಗಳಲ್ಲೇ ವಿಡೂಡಭನಿಗೆ ಮತ್ತೊಮ್ಮೆ ಜ್ಞಾಪಕವಾಯಿತು, ಆ ದಿವಸ ಶಾಕ್ಯರು ತನಗೆ ಮಾಡಿದ ಅಪಚಾರ. ಮತ್ತೆ ಕೋಪ ಉಕ್ಕಿತು, ಮತ್ತೆ ದಂಡೆತ್ತಿ ಹೋದನು. ಕಪಿಲ

ವಸ್ತುವಿನ ಬಳಿಯ ಗಡಿಯನ್ನು ಸಮೀಪಿಸುವಾಗ ಮತ್ತೆ ಅದೇ ನೆರಳಿಲ್ಲದ ಮರದ ಬುಡದಲ್ಲಿ ಭಗವಂತನನ್ನು ಕಂಡನು. ಆ ಸಲವೂ ಶಾಕ್ಯರ ಮೇಲೆ ಕೈಮಾಡಲು ಮನಸ್ಸುಬಾರದೆ, ಪುನಃ ಶ್ರಾವಸ್ತಿಗೆ ಹಿಂದಿರುಗಿದನು.

ಮೂರನೆಯ ಸಲವೂ ಹಾಗೇ ಆಯಿತು. ಸೈನ್ಯದೊಡನೆ ಹೋದನು, ಭಗವಂತನನ್ನು ಕಂಡನು, ಸಂಹಾರಮಾಡಲಾರದೆ ಹಿಂದಿರುಗಿದನು.

ಆದರೆ, ನಾಲ್ಕನೆಯ ಸಲ ಮಾತ್ರ, ಭಗವಂತನು "ಶಾಕ್ಯರು ಈ ವಿಡೂಡಭನ ಕೈಯಿಂದ ಕೊಲೆಯಾಗುವರೋ ಇಲ್ಲವೊ?" ಎಂದು ಅವರ ಹಿಂದಿನ ಕರ್ಮಗಳನ್ನೆಲ್ಲ ತನ್ನ ದಿವ್ಯದೃಷ್ಟಿಯಿಂದ ಪರಿಶೀಲನೆಮಾಡುತ್ತ, "ಶಾಕ್ಯರು ತಾವು ಹಿಂದೆ ಮಾಡಿದ ಘೋರಕರ್ಮಗಳ ಫಲವಾಗಿ ಈಗ ಹೀಗೆ ಕೊಲೆಯಾಗುವರು. ಇದನ್ನು ತಪ್ಪಿಸುವುದು ಸಾಧ್ಯವಿಲ್ಲ." ಎಂದು ಎದ್ದುಹೋಗದೆ, ಜೇತವನದಲ್ಲೇ ಉಳಿದುಬಿಟ್ಟನು.

ನಾಲ್ಕನೆಯ ಸಲ, ವಿಡೂಡಭನು ನಿರಾತಂಕದಿಂದ ಕಪಿಲವಸ್ತುವಿಗೆ ನುಗ್ಗಿದನು.

ಭಗವಂತನ ಬಂಧುಗಳು ತಾವು ಜೀವಹಿಂಸೆಯನ್ನು ಮಾಡುವುದಿಲ್ಲ ವೆಂದು ವ್ರತ ಕೈಕೊಂಡವರು, ಇತರರ ಜೀವವನ್ನು ತೆಗೆಯುವ ಮೊದಲು ತಮ್ಮ ಜೀವವನ್ನು ಒಪ್ಪಿಸಿಬಿಡುವವರು. ಆದ್ದರಿಂದ ಅವರು ಪರಸ್ಪರ ವಾಗಿ ಹೇಳಿಕೊಂಡರು: "ನಾವೂ ಶಸ್ತ್ರಾಸ್ತ್ರಗಳನ್ನು ಕಲಿತಿದ್ದೇವೆ, ಅದರಲ್ಲಿ ಕುಶಲರಾಗಿದ್ದೇವೆ. ಬಿಲ್ಗಾರರಲ್ಲಿ ನಾವು ಮಹಾ ಸಮರ್ಥರು. ಆದರೂ ನಾವು ಯಾರನ್ನೂ ಕೊಲ್ಲಲು ಕೈಯೆತ್ತುವುದಿಲ್ಲ. ಆದರೂ, ಈಗ ಬಂದಿರುವ ಶತ್ರುಗಳನ್ನು ಬೆದರಿಸಿ ಓಡಿಸದೆ ಬಿಡುವವರಲ್ಲ."

ಹೀಗೆಂದುಕೊಂಡು, ಶಾಕ್ಯರು ತಮ್ಮ ಯುದ್ಧಕಾಲದ ಉಡುಪು ಗಳನ್ನು ತೊಟ್ಟುಕೊಂಡು, ಬಿಲ್ಲು ಬಾಣಗಳನ್ನು ಹಿಡಿದು ಹೋದರು. ವಿಡೂಡಭನ ಸೈನ್ಯದ ಮೇಲೆ ಅವರು ಬಾಣಗಳ ಮಳೆ ಕರೆದರೂ, ಆ ಬಾಣಗಳು ಶತ್ರುಗಳ ಸಾಲಿನ ಮಧ್ಯೆ, ಅವರ ಮೈಗೆ ಮುತ್ತಿಕ್ಕಿಕೊಂಡು, ಮುಟ್ಟಿಯೂ ಮುಟ್ಟದಂತೆ ಹೋದವೇ ಹೊರತು, ಯಾರಿಗೂ ಏನೊಂದೂ ಗಾಯವಾಗಲಿಲ್ಲ, ಯಾರೂ ಸಾಯಲಿಲ್ಲ.

ಬಾಣಗಳು ಮಾತ್ರ ಒಂದರ ಹಿಂದೆ ಹತ್ತು ಅವಿಚ್ಛಿನ್ನವಾಗಿ ಬರುವು

ದನ್ನು ಕಂಡು, ವಿಡೂಡಭನು ಶಾಕ್ಯರನ್ನು ಹಂಗಿಸಿದನು: "ಶಾಕ್ಯರು ತಮ್ಮ ಶತ್ರುಗಳನ್ನು ಸಂಹರಿಸುವುದಿಲ್ಲ, ಅವರು ಭಗವಂತನ ಬಂಧುಗಳು, ಪ್ರಾಣಿಹಿಂಸೆಗೆ ಹೇಸುವವರು, ಎಂದೆಲ್ಲಾ ಜಂಬ ಕೊಚ್ಚುವುದನ್ನು ಕೇಳಿದ್ದೇನೆ. ಆದರೆ, ಈಗ ನೋಡಿ: ಅದೇ ಶಾಕ್ಯರು ನನ್ನ ಸೈನಿಕರನ್ನು ಹೇಗೆ ಬಾಣಗಳಿಂದ ಕೊಲ್ಲುತ್ತಿದ್ದಾರೆ!"

ಅವನ ಕಡೆಯುವನೇ ಸೇನಾಪತಿಯೊಬ್ಬ ಹೇಳಿದ: "ದೊರೆಯೆ! ಸ್ವಲ್ಪ ಹಾಗೆ ಹಿಂದಿರುಗಿ ನೋಡಬಾರದೆ!"

"ನೋಡಬೇಕಾದ್ದೇನು? ಶಾಕ್ಯರಿಂದ ಸಂಹೃತರಾದವರನ್ನು ನಾನು ನೋಡಲಾರೆ!"

"ಹಾಗಲ್ಲ, ದೊರೆಯೆ. ನಮ್ಮಲ್ಲಿ ಯಾರೂ ಸತ್ತಿಲ್ಲ. ಬೇಕಾದರೆ, ಸೈನಿಕರನ್ನು ಎಣಿಸಿ ನೋಡಬಹುದು."

ವಿಡೂಡಭನು ತನ್ನ ಸೇನೆಯನ್ನು ಗಣನೆಮಾಡಿಸಿದನು. ನಿಜವೇ, ಸೇನಾಪತಿ ಹೇಳಿದಂತೆ, ಯಾರೂ ಸತ್ತಿರಲಿಲ್ಲ.

ಆಗ ವಿಡೂಡಭನು ತನ್ನ ಸೈನಿಕರಿಗೆ ಹೀಗೆಂದು ಆಜ್ಞೆಮಾಡಿದನು:

"ಹೋಗಿರಿ, ಮುನ್ನುಗ್ಗಿರಿ. 'ನಾವು ಶಾಕ್ಯರು' ಎಂದು ಯಾರು ಹೇಳುವರೋ ಅವರೆಲ್ಲರನ್ನೂ ತರಿದುಹಾಕಿರಿ. ಶಾಕ್ಯನಾದ ಮಹಾನಾಮನ ಪರಿವಾರದವರನ್ನು ಮಾತ್ರ ಬದುಕಗೊಡಿರಿ. ಉಳಿದವರೆಲ್ಲರೂ ನಿಮ್ಮ ಕತ್ತಿಗಳಿಗೆ ಆಹಾರವಾಗಲಿ."

ಆಗ ಆರಂಭವಾಯಿತು ಮಹಾಸಂಹಾರ. ತಾನು ಶಾಕ್ಯನಲ್ಲ ವೆಂದು ಸುಳ್ಳು ಹೇಳುವವನೊಬ್ಬನಿಲ್ಲ, ಅದು ಹೇಳದೆ ಅವನು ಜೀವ ದೊಂದಿಗೆ ಉಳಿಯುವಂತಿಲ್ಲ. ಮಹಾನಾಮನ ಪರಿವಾರದವರು ಹೊರತು ಉಳಿದವರೆಲ್ಲ ಕೊಲೆಯಾದರು. ಕೆಲವರು ಸುಳ್ಳು ಹೇಳಲಾರದೆ, ಜೀವ ಬಿಡಲೂ ಆರದೆ, ಹಲ್ಲಲ್ಲಿ ಹುಲ್ಲು ಕಚ್ಚಿಕೊಂಡು, ಬಾಯಲ್ಲಿ ಜೊಂಡು ಕಚ್ಚಿಗೊಂಡು, ಜೀವವುಳಿಸಿಕೊಂಡರು. ಅವರು ಹೊರತು ಉಳಿದವರೆಲ್ಲ ಸಂಹಾರವಾದರು. ತಾಯಿಯ ಎದೆಯಲ್ಲಿ ಹಾಲು ಕುಡಿಯುತ್ತಿದ್ದ ಮಕ್ಕಳನ್ನೂ ಬಿಡಲಿಲ್ಲ. ರಕ್ತದ ಹೊಳೆ ಹರಿಯಿತೆಂದರೆ, ಅದು ಕವಿಗಳ ಬಳಕೆಯ ಉತ್ಪ್ರೇಕ್ಷೆಯಂತಾಗಲಿಲ್ಲ. ಹಗೆಯುವರ ಗಂಟಲನ್ನು ಸೀಳಿ,

ಅಲ್ಲಿನ ಬಿಸಿಯಾದ ನೊರೆರಕ್ತದಿಂದ ವಿಡೂಡಭನು ತನ್ನ ಪೀಠವನ್ನು, ಆ ದಿವಸ ಪ್ರತಿಜ್ಞೆಮಾಡಿದ್ದ ಹಾಗೆ, ತೊಳೆದು ತೃಪ್ತಿಗೊಂಡನು. ಶಾಕ್ಯ ಸಂಹಾರವನ್ನು ಸಾಧಿಸಿದೆನೆಂದು ಅವನಿಗೆ ನೆಮ್ಮದಿಯಾಯಿತು.

ವಿಡೂಡಭನು ಶ್ರಾವಸ್ತಿಗೆ ಹಿಂದಿರುಗುವಾಗ ಮಹಾನಾಮನನ್ನು ಸೆರೆಯಾಗಿ ಹಿಡಿದು ಕರೆದುಕೊಂಡು ಹೋದನು.

ದಾರಿಯಲ್ಲಿ, ಊಟದ ಸಮಯ ಪ್ರಾಪ್ತವಾದಾಗ, ಎಲ್ಲರೂ ಅಲ್ಲಿ ಒಂದೆಡೆ ತಂಗಿದರು. ವಿಡೂಡಭನ ಮುಂದೆ ಅನ್ನವನ್ನು ತಂದಿರಿಸಿದಾಗ "ನಾನು ನನ್ನ ಮಾತಾಮಹನ ಜೊತೆಯಲ್ಲಿ ಊಟಮಾಡಬೇಕೆಂದು ಇಚ್ಛಿಸುತ್ತೇನೆ" ಎಂದು ಮಹಾನಾಮನಿಗೆ ಹೇಳಿ ಕಳಿಸಿದನು.

ಆದರೆ, ಕ್ಷತ್ರಿಯವಂಶದಲ್ಲಿ ಹುಟ್ಟಿದವರು ತಮ್ಮ ಜೀವವನ್ನಾದರೂ ಬಿಟ್ಟಾರೇ ಹೊರತು, ದಾಸೀಪುತ್ರರ ಸಹಪಂಕ್ತಿಯಲ್ಲಿ ಭೋಜನ ಮಾಡುವವರಲ್ಲ. ಆದ್ದರಿಂದ ಮಹಾನಾಮನು ವಿಡೂಡಭನ ಬಯಕೆಯನ್ನು ಕೇಳಿ, "ಏನು ಮಾಡುವುದು?" ಎಂದು ಚಿಂತಿಸಿದನು.

ತಾವು ತಂಗಿದ್ದ ಸ್ಥಳದಲ್ಲಿ ಇದ್ದ ಒಂದು ಕೊಳ ಅವನ ಕಣ್ಣಿಗೆ ಬಿತ್ತು. "ನನ್ನ ಕೈಕಾಲು ದಾರಿಯ ದೂಳಿನಿಂದ ಮಲಿನವಾಗಿದೆ. ಹೋಗಿ ಸ್ನಾನಮಾಡಿಕೊಂಡು ಬರುತ್ತೇನೆ" ಎಂದು ಅಪ್ಪಣೆಯನ್ನು ಬೇಡಿದನು.

"ಆಗಬಹುದು. ಬೇಗ ಸ್ನಾನಮಾಡಿ ಬಾ, ಅಜ್ಜ."

ಮಹಾನಾಮನು ಪರಿಚ್ಛೇದಮಾಡಿಕೊಂಡ: "ಇವನೊಡನೆ ಊಟ ಮಾಡದೆ ಹೋದರೆ, ನನಗೆ ಮರಣವೆಂಬುದು ಖಂಡಿತ. ಅನಾಚಾರ ಮಾಡಿ ಬದುಕಿರುವುದಕ್ಕಿಂತ, ಕಂಡವರ ಕೈಯಲ್ಲಿ ಕೊಲೆಯಾಗುವುದಕ್ಕಿಂತ, ನಾನೇ ನನ್ನ ಮೃತ್ಯುವನ್ನು ತಂದುಕೊಳ್ಳುವುದು ಲೇಸು." ಎಂದುಕೊಂಡು, ಮಹಾನಾಮನು ತನ್ನ ತಲೆಯ ನಿಡಿಗೂದಲನ್ನು ಇಳಿಯ ಬಿಟ್ಟು, ಅದರ ತುದಿಯನ್ನು ಗಂಟು ಹಾಕಿ, ಆ ಕೂದಲ ರಾಶಿಯಲ್ಲಿ ತನ್ನ ಕಾಲುಗಳನ್ನು ಬಿಡಿಸಿಕೊಳ್ಳಲಾಗದಂತೆ ಸಿಕ್ಕಿಸಿ, ನೀರಿನಲ್ಲಿ ಮುಳುಗಿದನು.

ಅವನ ಪೂರ್ವಪುಣ್ಯದ ಪ್ರಭಾವದಿಂದ ಆ ಕೊಳದ ಒಳಗೆ ಅಸಾಧಾರಣ ಉಷ್ಣ ವ್ಯಾಪಿಸಿ, ಅಲ್ಲಿದ್ದ ನಾಗರಾಜನ ಭವನವು ಬಿಸಿಬಿಸಿಯಾಯಿತು. "ಇಷ್ಟು ಉಷ್ಣದ ಉತ್ಪತ್ತಿಗೆ ಕಾರಣವೇನಿರಬಹುದು?" ಎಂದು ನಾಗರಾಜನು ಕುರಿತು ಯೋಚಿಸಿ, ಮಹಾನಾಮನನ್ನು ಕಂಡನು. ಆ ಕೂಡಲೇ ಆ ನಾಗರಾಜನು ಮಹಾನಾಮನನ್ನು ತನ್ನ ಫಣಾಪೀಠದ ಮೇಲೆ ಕುಳ್ಳಿರಿಸಿಕೊಂಡು ತನ್ನ ಅರಮನೆಗೆ ಕರೆತಂದು, ಸತ್ಕರಿಸಿದನು. ಮಹಾನಾಮನು ಅಲ್ಲಿ ಹನ್ನೆರಡು ವರ್ಷಗಳ ಕಾಲ ವಾಸಮಾಡಿದನು.

ಇತ್ತ, ವಿಡೂಡಭನು "ನನ್ನ ಅಜ್ಜ ಈಗ ಬರುತ್ತಾನೆ! ಈಗ ಬರುತ್ತಾನೆ!" ಎಂದು ಕಾದು, ಕಾದು, ಸಂಜೆಯಾದರೂ ಅವನು ಬಾರದೆ ಇದ್ದುದನ್ನು ಕಂಡು, "ಏನಾದನೋ ಏನೋ!" ಎಂದು ದೀವಟಿಗೆಗಳ ಬೆಳಕಿನಲ್ಲಿ ಕೊಳವನ್ನೆಲ್ಲಾ ಶೋಧನೆ ಮಾಡಿಸಿದನು. ಕೊಳದೊಳಗೆ ದೇಹ ದೊರಕಲಿಲ್ಲವೆಂದು ನಿಶ್ಚಯವಾದ ಮೇಲೆ, ಅವನು ಎಲ್ಲೋ ತಪ್ಪಿಸಿಕೊಂಡಿರಬೇಕು ಎಂದು ಸೇನೆಯಲ್ಲೆಲ್ಲಾ ಹುಡುಕಾಡಿಸಿದನು. ಎಲ್ಲೆಲ್ಲಿ ಹುಡುಕಿದರೂ ಅವನು ಕಾಣಸಿಕ್ಕದ ಮೇಲೆ, ಬೇರೆ ಏನೂ ಮಾಡಲು ತೋಚದೆ, ಪಾಳಯವನ್ನು ಎತ್ತಿ ಊರಿಗೆ ಹೊರಟನು.

ರಾತ್ರಿಯ ವೇಳೆಗೆ ಅಚಿರವತೀ ನದೀತೀರದಲ್ಲಿ ಮತ್ತೆ ಪಾಳಯ ಬಿಟ್ಟರು. ಸೈನಿಕರಲ್ಲಿ ಕೆಲವರು ನದೀತೀರದ ಮರಳಿನ ಮೇಲೆ ಮಲಗಿದರು, ಇನ್ನು ಕೆಲವರು ದಡದ ಮೇಲಿನ ಮಣ್ಣುನೆಲದಲ್ಲಿ ಮಲಗಿದರು. ನದೀತೀರದಲ್ಲಿ ಮಲಗಿದವರು ಹಿಂದೆ ಪುಣ್ಯಮಾಡಿದ್ದವರು, ದಡದ ಮೇಲೆ ಮಲಗಿದ್ದವರು ಹಿಂದೆ ಪಾಪ ಮಾಡಿದ್ದವರು. ರಾತ್ರಿಯ ಒಂದು ಹೊತ್ತಿನಲ್ಲಿ ದಡದ ಮಣ್ಣುನೆಲದ ಮೇಲೆ ಇರುವೆಗಳ ಕಾಟ ಅತಿಯಾಯಿತು. "ತುಂಬ ಇರುವೆ! ತುಂಬ ಇರುವೆ!" ಎಂದು ಅಲ್ಲಿ ಮಲಗಿದ್ದವರೆಲ್ಲ ಎದ್ದು, ನದೀ ತೀರಕ್ಕೆ ನುಗ್ಗಿದರು. ಅಲ್ಲಿ ಮೊದಲೇ ಇದ್ದವರು, ಈಗ ಬಂದವರಿಗೆ ಎಡೆಬಿಟ್ಟುಕೊಟ್ಟು, ತಾವು ದಡವನ್ನು ಏರಿದರು. ರಾತ್ರಿ ಇನ್ನೊಂದು ಹೊತ್ತಿನಲ್ಲಿ ಸುಂಟರಗಾಳಿ ಎದ್ದಿತು, ಒಂದೇ ಸಮನೆ ಮಳೆ ಸುರಿಯಿತು, ಅಚಿರವತೀ ನದಿಯಲ್ಲಿ ಅಸಾಧ್ಯವಾದ ಪ್ರವಾಹ ಬಂದು, ವಿಡೂಡಭನನ್ನೂ ಅವನ ಪಾಪಿ ಸೇನಾಪರಿವಾರವನ್ನೂ ಸಮುದ್ರಕ್ಕೆ

ಕೊಚ್ಚಿಕೊಂಡುಹೋಯಿತು. ಅಲ್ಲಿ ಅವರು ಮೀನು ಮೊಸಳೆ ತಿಮಿ ತಿಮಿಂಗಿಲಗಳಿಗೆ ತುತ್ತಾಗಿಹೋದರು.

ಶ್ರಾವಸ್ತಿಯಲ್ಲಿ ಎಲ್ಲಿ ನೋಡಿದರೂ, ಇದೇ ಗುಜುಗುಜು: "ಶಾಕ್ಯರನ್ನು ಸಂಹರಿಸಿದ್ದು ಅನ್ಯಾಯ. ಶಾಕ್ಯರನ್ನು ಸಂಹರಿಸಬೇಕೆಂದು ಛಲದಿಂದ ಇವರು ಹೋದದ್ದು ಅನ್ಯಾಯ!" ಊರಲ್ಲಿಯೂ ಇದೇ ಮಾತು, ವಿಹಾರದಲ್ಲಿಯೂ ಇದೇ ಮಾತು.

ವಿಹಾರದಲ್ಲಿ ಭಿಕ್ಷುಗಳು ಹಾಗೆ ಮಾತನಾಡುತ್ತಿದ್ದುದನ್ನು ಕೇಳಿ, ಭಗವಂತನು ಬಂದು ಹೀಗೆ ಹೇಳಿದನು:

"ಭಿಕ್ಷುಗಳೆ, ಈ ಜನ್ಮದಲ್ಲಿ ಕಂಡ ಬದುಕಷ್ಟನ್ನು ಮಾತ್ರ ಕುರಿತು ಹೇಳುವುದಾದರೆ, ಶಾಕ್ಯರು ಈ ರೀತಿಯಲ್ಲಿ ಸಂಹಾರವಾದದ್ದು ತುಂಬ ಅನ್ಯಾಯ. ಆದರೆ. ಅವರು ತಮ್ಮ ಹಿಂದಿನ ಜನ್ಮದಲ್ಲಿ ಮಾಡಿದ ಪಾಪ ಕಾರ್ಯಗಳನ್ನು ಗಮನಿಸಿದರೆ, ಈ ಫಲವನ್ನು ಅನುಭವಿಸದೆ ಇರುವುದು ಸಾಧ್ಯವೇ ಇಲ್ಲ. ಕರ್ಮವನ್ನು ಕಂಡರೆ, ಅದಕ್ಕೆ ತಕ್ಕ ಕರ್ಮಫಲ ಬರುವುದೂ ನ್ಯಾಯವೇ ಎಂದು ಹೇಳಬೇಕಾಗುತ್ತದೆ.

"ಅವರು, ತಮ್ಮ ಹಿಂದಿನ ಜನ್ಮದಲ್ಲಿ ದ್ರೋಹಚಿಂತನೆ ಮಾಡಿ, ನದಿಯೊಂದರ ನೀರಿನಲ್ಲಿ ವಿಷವನ್ನು ಬೆರಸಿಹಾಕಿದ್ದರು."

ಮತ್ತೊಂದು ದಿವಸ ಧರ್ಮಾಗಾರದಲ್ಲಿ ಭಿಕ್ಷುಗಳೆಲ್ಲ ಇದನ್ನು ಕುರಿತು ಚರ್ಚೆಮಾಡುತ್ತಿದ್ದರು. ಏನೆಂದರೆ: "ವಿಡೂಡಭನೇನೋ ತಾನು ಪ್ರತಿಜ್ಞೆ ಮಾಡಿದ್ದರ ಪ್ರಕಾರ ಶಾಕ್ಯರನ್ನೆಲ್ಲಾ ಸಂಹಾರಮಾಡಿದೆನೆಂದು ತೃಪ್ತಿಪಟ್ಟಿರಬಹುದು. ಆದರೆ ಅವನೂ ಅವನ ಮಹಾಪರಿವಾರವೂ ಸಮುದ್ರಕ್ಕೆ ಕೊಚ್ಚಿಹೋಗಿ, ಮೀನು ಮೊಸಳೆ ತಿಮಿತಿಮಿಂಗಿಲಗಳಿಗೆ ಆಹಾರವಾದರಲ್ಲಾ. ಅವರು ಏನು ಸಾಧಿಸಿದ ಹಾಗಾಯಿತು?"

ಆ ಹೊತ್ತಿಗೆ ಭಗವಂತನು ಬಂದು, "ಏನು ವಿಚಾರ ನಡೆಯುತ್ತಿದೆ, ಭಿಕ್ಷುಗಳೆ?" ಎಂದನು.

ಭಿಕ್ಷುಗಳು ತಾವು ಮಾತನಾಡುತ್ತಿದ್ದುದನ್ನು ಹೇಳಿದರು.

ಆಗ ಭಗವಂತನು ಹೀಗೆಂದನು:

"ಭಿಕ್ಷುಗಳೆ, ಲೋಕದಲ್ಲಿ ಜನರು ತಮ್ಮ ತಮ್ಮ ಇಷ್ಟಾರ್ಥ ಈಡೇರಿತು ಎಂದುಕೊಳ್ಳುತಿರುವಾಗಲೇ ಮೃತ್ಯುರಾಜನು ಬಂದು ಎರಗುತ್ತಾನೆ. ರಾತ್ರಿ ಮೈಮರೆದು ನಿದ್ರಿಸುತ್ತಿರುವ ನದೀತೀರದ ಗ್ರಾಮವನ್ನು ಮಹಾಪ್ರವಾಹವು ಬಂದು ಕೊಚ್ಚಿಕೊಂಡು ಹೋಗುವ ಹಾಗೆ, ಮೃತ್ಯುರಾಜನು ಪ್ರಾಣಿಗಳ ಜೀವವನ್ನು ಕೊಚ್ಚಿಕೊಂಡುಹೋಗಿ, ಸಂಸಾರದ ಸಮುದ್ರಗಳಲ್ಲಿ ದುಃಖದ ಬಾಯಿಗೆ ತಳ್ಳಿಬಿಡುತ್ತಾನೆ. ಆದ್ದರಿಂದ ಭಿಕ್ಷುಗಳೆ, ಪ್ರಾಣಿಯಾದವನು ಎಂದಿಗೂ ಪ್ರಮತ್ತನಾಗಿರದೆ, ಸದಾ ಅಪ್ರಮಾದದಿಂದ ಕೂಡಿದವನಾಗಿರಬೇಕು."

# ಅನಾಥಪಿಂಡಿಕ

"ಈ ಜೇತವನ, ಜೇತವನ ಎಂದು ಹೇಳುತ್ತಿದ್ದೆಯಲ್ಲ, ಅದು ಏನದು?"

"ಅದು ಅನಾಥಪಿಂಡಿಕ ಎಂಬವನು ಭಗವಂತನಿಗೆ ದಾನ ಮಾಡಿದ ಒಂದು ದೊಡ್ಡ ತೋಟ ಅದರ ನಡುವೆ ಒಂದು ವಿಹಾರವನ್ನು ಕಟ್ಟಿಸಿ, ಅದನ್ನು ಅವನು ಸಂಘಕ್ಕೆ ದಾನಮಾಡಿದನು."

"ಈ ಅನಾಥಪಿಂಡಿಕ ಯಾರು? ಇವನು ದಾನ ಕೊಟ್ಟ ತೋಟಕ್ಕೆ ಜೇತವನ ಎಂದು ಏಕೆ ಹೆಸರು ಬಂತು?"

"ಮೊದಲಿನಿಂದ ಹೇಳುತ್ತೇನೆ, ಕೇಳು."

— ೧ —

ಅನಾಥಪಿಂಡಿಕ ಎಂಬವನು ಶ್ರಾವಸ್ತೀನಗರದ ಒಬ್ಬ ಧನಾಢ್ಯನಾದ ಶ್ರೇಷ್ಠಿ. ಇವನ ಹೆಂಡತಿ ಪುಣ್ಯಲಕ್ಷಣಾ ಎಂಬವಳು ರಾಜಗೃಹದ ಶ್ರೇಷ್ಠಿಯ ತಂಗಿ. ಇವರಿಬ್ಬರು ಭಾವಭಾವಂದಿರೂ ತುಂಬ ಅನ್ಯೋನ್ಯವಾಗಿದ್ದರು. ಒಬ್ಬರು ಇನ್ನೊಬ್ಬರ ಊರಿಗೆ ಆಗಾಗ್ಗೆ ವ್ಯಾಪಾರಕ್ಕೆ ಪ್ರಯಾಣಮಾಡುವರು. ಅಂಥ ಸಂದರ್ಭದಲ್ಲಿ, ಒಬ್ಬರು ಇನ್ನೊಬ್ಬರನ್ನು ಅವರು ಊರಿನಿಂದಾಚೆ ಇನ್ನೂ ಹದಿನಾರು ಮೈಲಿ ದೂರದಲ್ಲಿ ಇರುವಾಗಲೇ ಹೋಗಿ ಎದುರುಗೊಂಡು ಕರೆತರುವರು. ಹೀಗೇ ಬಹು ಕಾಲ ನಡೆದು ಬಂದಿತ್ತು.

ಆದರೆ ಒಂದು ಸಲ, ಅನಾಥಪಿಂಡಿಕನು ಕಾರ್ಯಾರ್ಥವಾಗಿ ರಾಜಗೃಹಕ್ಕೆ ಹೋದಾಗ ಎಂದಿನಂತೆ ಆ ಸ್ನೇಹಿತ ಬಂದು ಎದುರುಗೊಳ್ಳಲಿಲ್ಲ. ಅನಾಥಪಿಂಡಿಕನಿಗೆ ಅದು ವಿಚಿತ್ರವಾಗಿ ತೋರಿತು. ನಗರವನ್ನು ಪ್ರವೇಶಿಸಿ, ಆ ಶ್ರೇಷ್ಠಿ ವಾಸವಾಗಿದ್ದ ಬೀದಿಗೆ ಬಂದು, ಅವನ ಮನೆಯ ಬಾಗಿಲಿಗೆ ಬಂದಾಗಲೂ ಆ ಶ್ರೇಷ್ಠಿಯನ್ನು ಕಾಣುವುದಾಗಲಿಲ್ಲ.

ಅನಾಥಪಿಂಡಿಕನು ಮನೆಯೊಳಗೆ ಪ್ರವೇಶಿಸಿ ನೋಡಿದನು. ಯಾವುದೋ ಮದುವೆಗೆ ಏನೋ ಸಿದ್ಧತೆಮಾಡುತ್ತಿರುವಂತೆ ಎಲ್ಲರೂ

ಸಂಭ್ರಮದಿಂದ ಓಡಿಯಾಡುತ್ತಿದ್ದರು. ಮನೆಯ ಯಜಮಾನನನ್ನು ಕಂಡು ಮಾತನಾಡಿಸಿದರೆ, ಅವನು ಎಷ್ಟೋ ಅಷ್ಟು ಕುಶಲ ಪ್ರಶ್ನೆಗಳನ್ನು ಕೇಳಿ ಸ್ವಾಗತಮಾಡಿ, ಏನೋ ಅನ್ಯಾಕ್ರಾಂತವಾದವನಂತೆ ಸಡಗರದಿಂದ ಹೊರಟುಹೋದ.

ಇದು ಅನಾಥಪಿಂಡಿಕನಿಗೆ ಹೊಸ ಅನುಭವ. ಆದರೂ ತನ್ನ ಬಂಧುವಿನ ಈ ಅಪೂರ್ವಚರ್ಯೆಗೆ ಏನೋ ಯುಕ್ತವಾದ ಕಾರಣವಿರಬೇಕೆಂದು ಆಗ ಸುಮ್ಮನಿದ್ದು, ಆ ರಾತ್ರಿ ವಿರಾಮ ದೊರಕಿದಾಗ ಅವನನ್ನು ಕೇಳಿದ:

"ಇದೇನಿದು ಸಡಗರ? ಇದೇನಿದು ಸಂಭ್ರಮ?"

ರಾಜಗೃಹದ ಶ್ರೇಷ್ಠಿ ಹೇಳಿದ:

"ನಾಳೆಯ ದಿವಸ ಭಗವಂತನಾದ ಬುದ್ಧನೂ ಆತನ ಭಿಕ್ಷುಸಂಘವೂ ಇಲ್ಲಿಗೆ ಭಿಕ್ಷೆಗಾಗಿ ಬರುತ್ತಾರೆ. ಅವರ ಸೇವೆಗಾಗಿ ಈ ಇಷ್ಟೆಲ್ಲ ಸಿದ್ಧತೆ. ಆದರಲ್ಲಿಯೇ ನನ್ನ ಮನಸ್ಸು ಆಸಕ್ತವಾಗಿದ್ದುದರಿಂದ, ನಿನಗೆ ಸರಿಯಾದ ಸತ್ಕಾರವನ್ನು ಎಂದಿನಂತೆ ಈ ಸಲ ಸಲ್ಲಿಸಲು ಆಗದೆ ಹೋಯಿತು."

ಬುದ್ಧನೆಂಬ ಹೆಸರನ್ನು ಕೇಳಿದೊಡನೆಯೇ ಅನಾಥಪಿಂಡಿಕನಿಗೆ ರೋಮಾಂಚವಾಯಿತು, ಅಮೃತದ ಮಳೆಯಲ್ಲಿ ನೆನೆದಂತೆ ಹೃದಯಕ್ಕೆ ಯಾವುದೋ ತಂಪಿನ ಅನುಭವವಾಯಿತು. ಭಗವಂತನನ್ನು ಕೂಡಲೆ ದರ್ಶನ ಮಾಡಬೇಕೆಂಬ ಅತ್ಯುತ್ಕಟವಾದ ಇಚ್ಛೆಯುಂಟಾಯಿತು.

ಭಗವಂತನ ಹೆಸರು ಕೇಳಿದೊಡನೆಯೇ ಅನಾಥಪಿಂಡಿಕನಿಗೆ ಈತೆರದ ಪರಿಣಾಮವಾದದ್ದರಲ್ಲಿ ಏನು ಆಶ್ಚರ್ಯ? ಎಷ್ಟೋ ಕಲ್ಪಗಳ ಹಿಂದೆ, ಪದ್ಮೋತ್ತರನೆಂಬ ಬುದ್ಧನು ಉದಯಿಸಿದ್ದ ಕಾಲದಲ್ಲಿ ಇದೇ ಅನಾಥಪಿಂಡಿಕನು ಹಂಸನಗರದಲ್ಲಿ ಹೆಸರಾದ ಗೃಹಸ್ಥನಾಗಿದ್ದನು. ಆಗ ಒಂದು ದಿನ ಪದ್ಮೋತ್ತರನು ತನ್ನ ಗೃಹಸ್ಥ ಶಿಷ್ಯನೊಬ್ಬನನ್ನು ಕುರಿತು 'ನಮಗೆ ದಾನಕೊಡುವವರಲ್ಲೆಲ್ಲಾ ಈತನೇ ಉತ್ತಮನಾದ ದಾನಪತಿ' ಎಂದು ಕೀರ್ತಿಸಿದ್ದನ್ನು ಕೇಳಿ, "ನಾನೂ ಮುಂದೆ ಎಂದಾದರೂ ಇನ್ನೊಬ್ಬ ಬುದ್ಧನಿಂದ ಇಂಥದೇ ಹೆಸರನ್ನು ಪಡೆಯುವವನಾಗಲಿ!"

ಎಂದು ಹಾರೈಸಿಕೊಂಡು, ಅಂದಿನಿಂದ ದಾನವೇ ಮೊದಲಾದ ಪುಣ್ಯ ಕರ್ಮಗಳನ್ನು ನಡಸುತ್ತಿದ್ದನು. ಆ ಎಲ್ಲ ಪುಣ್ಯಗಳ ಸಂಚಿತದ ಫಲ ವಾಗಿ ಅನಾಥಪಿಂಡಿಕನಿಗೆ ಬುದ್ಧನ ಹೆಸರು ಕೇಳಿದೊಡನೆ ಆಕಡೆಗೆ ಹೋಗುವ ಒಲವು ಉಂಟಾಯಿತು.

ಎಷ್ಟೋ ಕಲ್ಪಗಳಿಂದ ಕೂಡಿಕೂಡಿ ಬಂದ ಬಯಕೆ ಆ ಕೂಡಲೆ ಈಡೇರಬೇಕೆಂಬು ಅನಾಥಪಿಂಡಿಕನಿಗೆ ಉಂಟಾಗುವುದು ಅದು ಸಹಜವೇ ಆದರೂ, ಅವನ ಸ್ನೇಹಿತ ಹೇಳಿದ: "ಈಗ ಭಗವಂತನು ವಿಶ್ರಾಂತಿಗೆ ಇಳಿದಿರುವ ಕಾಲ. ಈಗ ಆತನನ್ನು ಕಾಣಲು ಹೋಗುವುದು ತಕ್ಕದ್ದಲ್ಲ."

ಅನಾಥಪಿಂಡಿಕ ತನ್ನ ಕಾತರವನ್ನು ಹಿಡಿದಿಡಲಾರ. ಆದರೆ ಆಗಲೇ ಹೋಗದೆ ಇರಲೂ ಆರ. ರಾತ್ರಿ ಮಲಗಿಕೊಳ್ಳಬೇಕೆಂದು ಮೈ ಚಾಚಿದರೆ, ನಿದ್ರೆ ಬಾರದು. ರಾತ್ರಿಯ ಮೊದಲನೆಯ ಯಾಮದಲ್ಲಿ ಯಾವುದೋ ಒಂದು ಅಲೌಕಿಕವಾದ ಬೆಳಕು ಅವನ ಶಯ್ಯಾಗೃಹದಲ್ಲಿ ಕಾಣಿಸಿಕೊಂಡಿತು. ಬೆಳಗಾಯಿತೆಂದು ದಿಗ್ಗನೆ ಎದ್ದು, ಹೊರಗೆ ಬಂದು ನೋಡಿದರೆ, ಪೂರ್ಣಚಂದ್ರನ ಬೆಳಕು ರಾತ್ರಿ ಇನ್ನೂ ಮುಗಿದಿಲ್ಲವೆಂದು ಸಾರುತ್ತಿತ್ತು.

ಮತ್ತೆ ಮಲಗಲು ಯತ್ನಿಸಿದನು. ರಾತ್ರಿಯ ಎರಡನೆಯ ಯಾಮ ದಲ್ಲಿಯೂ ಹಾಗೆಯೇ ಯಾವುದೋ ಅಲೌಕಿಕವಾದ ಬೆಳಕು ಮತ್ತೆ ಕಾಣಿಸಿಕೊಂಡಿತು ಆಗಲೂ ಎದ್ದು, ಇನ್ನೂ ರಾತ್ರಿಯೆಂದು ಮತ್ತೆ ಮಲಗಿದನು.

ಮೂರನೆಯ ಯಾಮದಲ್ಲಿ ತಿರುಗಿಯೂ ಹಾಗೇ ಆಯಿತು. ಆದರೆ ಆಗ ಮಾತ್ರ ಅವನು ಮತ್ತೆ ಮಲಗದೆ, "ಮೂರು ಯಾಮ ಕಳೆಯಿತು. ಸ್ವಲ್ಪ ಕತ್ತಲೆ ಇದ್ದರೆ ಏನಂತೆ? ಈಗಲೇ ಹೊರಟು, ಅದಷ್ಟು ಬೇಗ ಭಗವಂತನನ್ನು ಕಂಡು ಬರಬೇಕು" ಎಂದು ಎದ್ದು ಹೊರಟೇಬಿಟ್ಟನು.

ಆ ಕಾಲದಲ್ಲಿ ಭಗವಂತನು ರಾಜಗೃಹದ ಸಮೀಪದಲ್ಲಿದ್ದ ಸೀತವನ ದಲ್ಲಿ ತಂಗಿದ್ದನು. ಸೀತವನಕ್ಕೆ ಹೋಗುವ ದಾರಿಯಲ್ಲಿ ಭಯಭೈರವ ವೆಂಬುದೊಂದು ಶ್ಮಶಾನ. ಸೀತವನಕ್ಕೆಂದು ಹೊರಟ ಅನಾಥಪಿಂಡಿಕನು

ಆ ಶ್ಮಶಾನದ ಸಮೀಪಕ್ಕೆ ಬಂದ ಕೂಡಲೆ, ಅವನಿಗೆ ಎಲ್ಲಿಲ್ಲದ ಭಯ ವುಂಟಾಯಿತು. ಬಳಿಯಲ್ಲಿ ಯಾವುದೋ ಹೆಣ ಕೊಳೆತು ಅದರ ದುರ್ಗಂಧ ಸಹಿಸಲಶಕ್ಯವಾಗಿತ್ತು. ಅವನಿಗೆ ಅದರಿಂದ ಇನ್ನಷ್ಟು ದಿಗಿಲಾಯಿತು. ದಿಗಿಲು ಅಧಿಕವಾದೊಡನೆ, ಅದುವರೆಗೂ ಅವನ ಜೊತೆಗಿದ್ದ ಆ ಅಲೌಕಿಕ ವಾದ ಬೆಳಕು ಅಂತರ್ಧಾನವಾಗಿ, ಸುತ್ತಲೂ ಕತ್ತಲೆ ಕವಿದುಕೊಂಡಿತು.

ಆದರೆ ಅದೇ ಶ್ಮಶಾನದಲ್ಲಿ ವಾಸವಾಗಿದ್ದ ಒಂದು ದೇವತೆ ಅವನಿಗೆ ಧೈರ್ಯ ಹೇಳಿತು: "ಧರ್ಮಕಥನವನ್ನು ಕೇಳಬೇಕೆಂದು ಹೊರಟವರು ಪುಣ್ಯವಂತರು. ಪುಣ್ಯವಂತರಾದವರಿಗೆ ಯಾವ ಭಯವೂ ಇರಬಾರದು." ಆ ದೇವತೆಯ ಪ್ರೋತ್ಸಹನದಿಂದ ಭಯವನ್ನು ಅವನು ಕಳೆದು ಕೊಂಡನೋ ಇಲ್ಲವೋ, ಆ ಕೂಡಲೆ ಮರೆಯಾಗಿದ್ದ ಅಲೌಕಿಕವಾದ ಬೆಳಕು ಮತ್ತೆ ಪ್ರತ್ಯಕ್ಷವಾಯಿತು.

ಶ್ಮಶಾನವನ್ನು ಹಿಂದೆ ಬಿಟ್ಟು ಮುಂದೆ ಹೋಗುತ್ತಾ ಇರುವಾಗ ಅನಾಥಪಿಂಡಿಕನ ಮನಸ್ಸಿನಲ್ಲಿ ಹೀಗೆ ಆಲೋಚನೆ ಬಂತು: "ತಾವು ಬುದ್ಧ ರೆಂದೂ ಸರ್ವಜ್ಞರೆಂದೂ ಹೇಳುವವರು ಈಗ ಹಲವರು ಇದ್ದಾರೆ. ಸುಮ್ಮನೆ ಅವರ ಮಾತನ್ನು ನಂಬಿ ನಾನು ಮೋಸಹೋಗಲೂ ಬಹುದು. ಆದರೆ ಈ ಬುದ್ಧನೆಂಬವನ ಸರ್ವಜ್ಞತ್ವವನ್ನು ಪರೀಕ್ಷಿಸಲು ಒಂದು ಉಪಾಯ ಇದೆ. ಈಗ ಅನಾಥಪಿಂಡಿಕನೆಂದು ಹೆಸರಾಗಿರುವ ನನಗೆ ನನ್ನ ತಾಯಿತಂದೆ 'ಸುದತ್ತ' ಎಂದು ನಾಮಕರಣ ಮಾಡಿದರು. ಈಗ ಈ ಬುದ್ಧನನ್ನು ಕಂಡಾಗ, ಈತನಿಗೆ ನನ್ನ ಈ ನಾಮಕರಣದ ಹೆಸರು ತಿಳಿದಿದೆಯೆಂದು ಕಂಡುಬಂದರೆ, ಇವನನ್ನು ಬುದ್ಧನೆಂದು ಒಪ್ಪುತ್ತೇನೆ. ಇಲ್ಲದಿದ್ದರೆ, ಬುದ್ಧನನ್ನು ಬೇರೆ ಕಡೆ ಹುಡುಕಬೇಕು."

ಹೀಗೆಂದುಕೊಂಡು ಅನಾಥಪಿಂಡಿಕನು ಸೀತವನವನ್ನು ಪ್ರವೇಶಿ ಸುವ ಹೊತ್ತಿಗೆ ಭಗವಂತನು ಅಲ್ಲಿ ಶತಪದ ತಿರುಗುತ್ತಿದ್ದನು. ಅನಾಥ ಪಿಂಡಿಕನನ್ನು ಕಂಡೊಡನೆಯೆ, ಅವನ ಮನಸ್ಸಿನಲ್ಲಿ ಏನು ಶಂಕೆಯಿದೆ ಯೆಂಬುದನ್ನು ಕಂಡುಕೊಂಡ ಸರ್ವಜ್ಞನಾದ ಭಗವಂತನು "ಇತ್ತ ಬಾ. ಸುದತ್ತ!" ಎಂದು ಕರೆದನು. ಆ 'ಸುದತ್ತ' ಎಂಬ ಸಂಬೋಧನೆ ಅಷ್ಟರಿಂದಲೇ ಅನಾಥಪಿಂಡಿಕನ ಹೃದಯದಲ್ಲಿ ಶ್ರದ್ಧೆ ಸ್ಥಿರವಾಯಿತು.

ಅಲ್ಲಿಯೇ ಭಗವಂತನಿಗೂ ಧರ್ಮಕ್ಕೂ ಸಂಘಕ್ಕೂ ತನ್ನ ಶರಣಾಗತಿಯನ್ನು ಒಪ್ಪಿಸಿ, ಕ್ಷಿಪ್ರದಲ್ಲಿಯೇ ಸ್ರೋತಾಪನ್ನನಾದನು. "ಪ್ರಾಣವಿರುವವರೆಗೂ ಶರಣಾಗತನಾದ ಉಪಾಸಕನೆಂದು ಭಗವಂತನು ನನ್ನನ್ನು ಸ್ವೀಕರಿಸಬೇಕು" ಎಂದು ಬೇಡಿಕೊಂಡನು.

ಭಗವಂತನು ಅವನಿಗೆ ಸಂಗ್ರಹವಾಗಿ ಈ ಧರ್ಮವನ್ನು ಉಪದೇಶ ಮಾಡಿದನು: "ದುರಾಸೆಗಳನ್ನು ದೂರ ತೊರೆದವನು ಉತ್ತಮಗತಿಗೆ ಹೋಗುತ್ತಾನೆ. ತುಂಬ ಅಭಿವೃದ್ಧಿ ಪಡೆಯುತ್ತಾನೆ. ಪಾಪಗಳನ್ನು ಮಾಡದೆ, ಮನಸ್ಸನ್ನು ಬಿಗಿಬಿಡಿದು, ಸಮತ್ವವನ್ನು ಸಂಪಾದಿಸುವವನು ನಿರ್ವಾಣವನ್ನು ಪಡೆಯುತ್ತಾನೆ. ಅದು ಅವನ ಸಮೃದ್ಧಿ."

ಧರ್ಮೋಪದೇಶವು ಮುಗಿದ ಮೇಲೆ ಅನಾಥಪಿಂಡಿಕನು ಹೀಗೆ ಪ್ರಾರ್ಥನೆ ಮಾಡಿಕೊಂಡನು: "ಭಗವಂತನು ತನ್ನ ಭಿಕ್ಷುಸಂಘದೊಡನೆ ನಾಳೆ ನನ್ನ ಮನೆಗೆ ಭಿಕ್ಷೆಗೆ ದಯಮಾಡಬೇಕು."

ಭಗವಂತನು ಮೌನದಿಂದ ಸಮ್ಮತಿಯನ್ನು ಸೂಚಿಸಿದನು.

ಅನಾಥಪಿಂಡಿಕನು ಮನೆಗೆ ಹಿಂದಿರುಗಿ, ಭಗವಂತನನ್ನು ಭಿಕ್ಷೆಗೆ ಕರೆದಿದ್ದನ್ನು ಸ್ನೇಹಿತನಿಗೆ ತಿಳಿಸಿದನು. ಸ್ನೇಹಿತನು ಅದನ್ನು ಕೇಳಿ ತುಂಬಾ ಸಂತೋಷಪಟ್ಟು, ಮಾರನೆಯ ದಿನದ ಭಿಕ್ಷೆಗೆ ತಾನು ಎಲ್ಲವನ್ನೂ ಒದಗಿಸಿಕೊಡುವುದಾಗಿ ಹೇಳಿದನು. ಆದರೆ ಅನಾಥಪಿಂಡಿಕ ಅದಕ್ಕೆ ಒಪ್ಪಲಿಲ್ಲ. ಮಾರನೆಯ ದಿನದ ಅಡುಗೆಗೆ ಬೇಕಾದ ಆಹಾರ ಪದಾರ್ಥಗಳು ಮಾತ್ರವಲ್ಲದೆ, ಅಡುಗೆಯ ಪಾತ್ರೆಗಳನ್ನು ಕೂಡ ತಾನೇ ತನ್ನ ಹಣದಿಂದ ಕೊಂಡುಕೊಂಡು, ತನ್ನ ವೆಚ್ಚದಿಂದ ಅಡುಗೆಗೆ ಜನರನ್ನು ನೇಮಿಸಿ, ಸಿದ್ಧತೆಗಳಿಗೆ ತೊಡಗಿದ. ರಾಜಗೃಹದ ರಾಜನೂ ನಗರ ಪ್ರಧಾನನೂ ಅವನಿಗೆ ಬೇಕಾದ ಅನುಕೂಲತೆಗಳನ್ನು ತಾವು ಒದಗಿಸುವೆವೆಂದು ಮುಂದೆ ಬಂದರೂ ಅನಾಥಪಿಂಡಿಕ ಹೇಳಿದ: "ಬೇಡಿ. ಇದರಿಂದ ಬರುವ ಎಲ್ಲ ಪುಣ್ಯವೂ ನನ್ನ ಪಾಲಿಗಿರಲಿ."

ಮಾರನೆಯ ದಿವಸ ಭಗವಂತನು ಭಿಕ್ಷುಸಂಘದೊಡನೆ ಬಂದನು. ಮಧ್ಯಾಹ್ನದ ಭೋಜನವಾದನಂತರ ಮನೆಯವರಿಗೆಲ್ಲ ಧರ್ಮವನ್ನು ಉಪದೇಶಮಾಡಿ, ಸೀತವನಕ್ಕೆ ಹಿಂದಿರುಗಿದನು.

— ೨ —

ಆ ಸಮಯದಲ್ಲಿ ಅನಾಥಪಿಂಡಿಕನು ಭಗವಂತನನ್ನು ಭಕ್ತಿಯಿಂದ ಕೇಳಿಕೊಂಡನು: "ಭಗವಂತನು ಶ್ರಾವಸ್ತಿಗೆ ದಯಮಾಡಬೇಕೆಂದು ನನ್ನ ಪ್ರಾರ್ಥನೆ. ಶ್ರಾವಸ್ತಿಯ ರಾಜನಾದ ಪ್ರಸೇನಜಿತನು ಕಾಶಿ ಕೋಸಲಗಳನ್ನು ಆಳುವವನು. ನನಗೂ ಅಪಾರವಾದ ದ್ರವ್ಯಸಂಗ್ರಹ ವಿದೆ. ಅದನ್ನು ಸಂಘದ ಸೇವೆಗಾಗಿ ವ್ಯಯಮಾಡುವುದಕ್ಕೆ ನನಗೆ ಅವಕಾಶವಾಗಬೇಕು."

ಭಗವಂತನು ಹೇಳಿದನು: "ಅನಾಥಪಿಂಡಿಕ, ಭಿಕ್ಷುಸಂಘವು ಏಕಾಂತವಾಸದಲ್ಲಿ ರಮಿಸುತ್ತದೆ."

"ಏಕಾಂತವಾಸಕ್ಕೆ ತಕ್ಕ ಏರ್ಪಾಡು ಆಗುತ್ತದೆ. ಭಗವನ್" ಎಂದು ಅನಾಥಪಿಂಡಿಕನು ಬಿನ್ನವಿಸಿದನು.

ರಾಜಗೃಹದಿಂದ ಶ್ರಾವಸ್ತಿಗೆ ನಲವತ್ತೈದು ಯೋಜನ ದೂರ. ಅಷ್ಟು ದೂರದ ಉದ್ದಕ್ಕೂ ಅಲಂಕಾರಮಾಡಿಸಿ, ಅಲ್ಲಲ್ಲಿ ವಿಶ್ರಾಂತಿ ಗೃಹಗಳನ್ನು ಕಟ್ಟಿಸಿ, ಬರುವವರಿಗೆ ಆಯಾಸವಾಗದಂತೆ ಅನಾಥಪಿಂಡಿ ಕನು ಏರ್ಪಾಟುಮಾಡಿದನು. ಮಾರ್ಗದಲ್ಲಿದ್ದ ತನ್ನ ಮಿತ್ರರಿಗೆಲ್ಲಾ ಭಗವಂತನ ಆಗಮನವೃತ್ತಾಂತವನ್ನು ಹೇಳಿ, ಅವರಿಗೂ ಪುಣ್ಯವನ್ನು ಗಳಿಸುವ ದಾರಿಯನ್ನು ತೋರಿಕೊಟ್ಟನು.

ಭಗವಂತನು ಅನಾಥಪಿಂಡಿಕನ ಆಹ್ವಾನವನ್ನು ಒಪ್ಪಿಕೊಂಡಾಗ ಹೇಳಿದ್ದನು: "ಭಿಕ್ಷುಸಂಘವು ಏಕಾಂತದಲ್ಲಿ ರಮಿಸುವಂಥದು, ಅನಾಥ ಪಿಂಡಿಕ." ಭಗವಂತನ ಮಾತಿನ ಅರ್ಥ ಅವನಿಗೆ ಆಯಿತು. ಊರೊಳಗೆ ಇದ್ದರೆ, ಅವರ ಧ್ಯಾನ ಸಮಾಧಿಗಳಿಗೆ ಭಂಗವಾಗುವುದು, ಆದ್ದರಿಂದ ಅವರು ಊರ ಹೊರಗಿನ ನಿರ್ಜನವಾದ ವನಗಳಲ್ಲಿ ವಾಸಿಸಲು ಇಚ್ಛಿ ಸುವರು ಎಂದು ಅವನು ಗ್ರಹಿಸಿದನು. ಅದರಂತೆಯೇ, ಶ್ರಾವಸ್ತಿಗೆ ಬಂದ ವನು ಸರಿಯಾದ ಸ್ಥಳವಾವುದು, ಭಗವಂತನೂ ಭಿಕ್ಷುಸಂಘವೂ ತಂಗುವು ದಕ್ಕೆ, ಎಂದು ಪರಿಶೀಲಿಸಿದನು.

ಸ್ಥಳವು ಶ್ರಾವಸ್ತಿಯಿಂದ ಬಹಳ ದೂರವೂ ಆಗಬಾರದು, ಬಹಳ

ಸಮೀಪವೂ ಆಗಬಾರದು, ಅಂತಹ ಕಡೆ ವಿಹಾರವನ್ನು ಒದಗಿಸಬೇಕು. ಅಂತಹದು ಒಂದು ಅನುಕೂಲವಾದ ಸ್ಥಳವೂ ಇತ್ತು.

ಆದರೆ ಆ ಸ್ಥಳವು ಜೇತನೆಂಬ ರಾಜಕುಮಾರನಿಗೆ ಸೇರಿದ್ದು. ಅನಾಥಪಿಂಡಿಕನಿಗೆ, ಆ ಸ್ಥಳವನ್ನು ಕೊಂಡುಕೊಂಡು, ಅಲ್ಲಿ ಒಂದು ವಿಹಾರವನ್ನು ಕಟ್ಟಿಸಿ, ಆ ವಿಹಾರವನ್ನು ಸುತ್ತಿನ ವನಸಮೇತವಾಗಿ ಭಗವಂತನ ಭಿಕ್ಷುಸಂಘಕ್ಕೆ ದಾನಮಾಡಬೇಕೆಂದು ಇಷ್ಟವಾಯಿತು. ಆದರೆ ಜೇತನು ಆ ಸ್ಥಳವನ್ನು ಮಾರಿಬಿಡಲು ಒಪ್ಪಲಿಲ್ಲ. ಏನೇನು ಹೇಳಿದರೂ ಸುಲಭದಲ್ಲಿ ಒಪ್ಪಲಿಲ್ಲ.

ಕಡೆಗೆ, ಅನಾಥಪಿಂಡಿಕನ ಒತ್ತಾಯವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಹೀಗೆ ಹೇಳಿದ: "ನನ್ನ ಈ ವನದ ನೆಲವನ್ನೆಲ್ಲಾ ನೀನು ಚಿನ್ನದ ನಿಷ್ಕಗಳನ್ನು ಹಾಸಿ ಮುಚ್ಚಿದರೆ, ಆ ಬೆಲೆಗೆ ಈ ಭೂಮಿಯನ್ನು ಬೇಕಾದರೆ ಮಾರುತ್ತೇನೆ."

"ಓ, ಆಗಲಿ! ಅದು ಒಪ್ಪಿಗೆ!" ಎಂದು ಅನಾಥಪಿಂಡಿಕ, ತನ್ನ ಮನೆವಾರ್ತೆಯವನನ್ನು ಕರೆದು, ಬಂಡಿಗಳಲ್ಲಿ ಚಿನ್ನದ ನಿಷ್ಕಗಳನ್ನು ತರುವಂತೆ ಆಜ್ಞೆಮಾಡಿದನು.

ತಾನು ವಿನೋದಕ್ಕೆಂದು ಆಡಿದ ಮಾತನ್ನೇ ಅವನು ತಥ್ಯವೆಂದು ಪಟ್ಟುಹಿಡಿದುದನ್ನು ನೋಡಿ, "ನಾನು ಅದನ್ನು ಮಾರುವುದಿಲ್ಲ, ನನಗೆ ನಿನ್ನ ಚಿನ್ನ ಬೇಕಾಗಿಲ್ಲ." ಎಂದು ತಾನು ಆಡಿದ ಮಾತಿನಿಂದ ನುಣಚಿಕೊಳ್ಳಲು ಜೇತನು ನೋಡಿದನು.

ಅವನು ಮಾರಲು ಒಪ್ಪುವುದಿಲ್ಲ, ಇವನು ಅದನ್ನು ಮಾರದೆ ಬಿಡುವುದಿಲ್ಲ. ಕಡೆಗೆ ಶ್ರಾವಸ್ತಿಯ ಧರ್ಮಾಧಿಕರಣರು ಬಂದು, ಅವರ ವ್ಯವಹಾರವನ್ನು ವಿಚಾರಿಸಿ, ತೀರ್ಪುಕೊಟ್ಟರು: "ವಿಚಾರಮಾಡದೆ ಆಡಬಾರದು. ಆಡಿದ ಮೇಲೆ ಅದರಂತೆ ನಡೆಯತಕ್ಕದ್ದು" ಎಂದು ರಾಜಕುಮಾರ ಜೇತನಿಗೆ ವಿರುದ್ಧವಾಗಿ ತೀರ್ಮಾನವಾಯಿತು. ಜೇತನಾದರೂ ವಿಧಿಯಿಲ್ಲದೆ ತನ್ನ ವನವನ್ನು ಮಾರುವುದಕ್ಕೆ ಒಪ್ಪಬೇಕಾಯಿತು.

ಆದರೂ, ಜೇತ ರಾಜಕುಮಾರ ತನಗೆ ತಾನೇ ಹೀಗೆ ಸಮಾಧಾನ ಮಾಡಿಕೊಂಡ: "ನನ್ನ ವನವೇನೂ ಅಂಗೈಯಗಲದ ಅಳತೆಯದಲ್ಲ, ಒಂದು

ಸಾವಿರ ಆಳತೆಗಳ ಉದ್ದ ಅಗಲದ್ದು. ಅದರ ನೆಲವನ್ನು ಮುಚ್ಚುವ ಹಾಗೆ ಹಾಸುವುದಕ್ಕೆ ಬೇಕಾದ ಚಿನ್ನ ತಾನೆ ಯಾರ ಹತ್ತಿರ ಅಷ್ಟು ಇರುತ್ತದೆ? ಆದ್ದರಿಂದ ಇವರ ತೀರ್ಪೇನೋ ನನಗೆ ವಿರುದ್ಧವಾಗಿಯೇ ಇದ್ದರೂ, ತೋಟ ಅಂತೂ ನನ್ನ ಕೈ ಬಿಟ್ಟು ಹೋಗುವಂತಿಲ್ಲ."

ಅನಾಥಪಿಂಡಿಕನೂ ಅವನೂ ಒಟ್ಟಿಗೇ ಆ ವನಕ್ಕೆ ಹೋದರು. ಚಂದನ ಮತ್ತು ಮಾವು ಇಂತಹವನ್ನು ಬಿಟ್ಟು ಉಳಿದ ವೃಕ್ಷಗಳನ್ನು ಕಡಿಸಿಹಾಕಿದರು. ಕಾಮಾಟಗಳನ್ನು ಬಿಟ್ಟು ನೆಲವನ್ನು ಸಮಪ್ರದೇಶ ವಾಗಿ ಮಾಡಿಸಿದರು.

ಅನಾಥಪಿಂಡಿಕನು ತನ್ನ ಭಂಡಾರಿಯನ್ನು ಕರೆಸಿ, ಬೊಕ್ಕಸದಲ್ಲಿರ ತಕ್ಕದ್ದನ್ನೆಲ್ಲಾ ಒಂದು ಕಡೆ ಗುರುತುಮಾಡುವಂತೆ ಹೇಳಿದ. ಬೇಕು ಬೇಕಾದಹಾಗೆಲ್ಲಾ ಅದನ್ನು ಬಂಡಿಗಳಲ್ಲಿ ತುಂಬಿಕೊಂಡು ತರುವಂತೆ ನಿರ್ದೇಶಿಸಿದ. ಭಂಡಾರಿಯು ಒಡೆಯನ ಆಜ್ಞೆಯಂತೆ ಏಳು ಉಗ್ರಾಣ ಗಳಲ್ಲಿದ್ದುದನ್ನು ಹೊರಗೆ ತಂದು, ಕಾಳನ್ನು ಅಳೆದು ಹಾಕುವಂತೆ ಚಿನ್ನವನ್ನು ಅಳೆದು ಹಾಕಿದ. ಅದನ್ನೆಲ್ಲ ತಂದು ಆ ಜೇತನ ವನದಲ್ಲಿ ರಾಶಿಹಾಕಿದರು. ಒಂದು ಸಾವಿರ ಜನ ಅದಕ್ಕಾಗಿಯೇ ನಿಂತರು; ಒಬ್ಬೊಬ್ಬರೂ ಇಷ್ಟಿಷ್ಟು ಹಣವನ್ನು ಗಂಟು ಕಟ್ಟಿಕೊಂಡು ಹೋಗಿ, ನೆಲದ ಮೇಲೆ ಹಾಸತೊಡಗಿದರು.

ಅನಂತರ ಅನಾಥಪಿಂಡಿಕನು ತನ್ನವರಿಗೆ ಆಜ್ಞೆಮಾಡಿದನು: "ಯಾವ ಯಾವ ಮರಗಳು ಕಡಿಯದೆ ನಿಂತಿವೆಯೋ, ಅವು ಎಷ್ಟು ನೆಲ ವನ್ನು ಆಕ್ರಮಿಸಿವೆಯೋ ಅಷ್ಟನ್ನು ಅಳೆದು, ಅದನ್ನು ಕೂಡ ಹಾಸಿ ಮುಚ್ಚುವ ಚಿನ್ನವಷ್ಟನ್ನು ಬೇರೆ ತೆಗೆದು ಇಡಿರಿ."

ಇಷ್ಟೆಲ್ಲಾ ಚಿನ್ನವನ್ನು ತರಿಸಿ ಹಾಕಿದರೂ, ವನಕ್ಕೆ ಪ್ರವೇಶ ಮಾಡುವ ದ್ವಾರಪ್ರದೇಶ ಇನ್ನೂ ಹಾಗೇ ಬರಿದಾಗಿದ್ದುದನ್ನು ಕಂಡು, ಅನಾಥಪಿಂಡಿಕನು "ಇನ್ನೂ ತನ್ನಿ, ಇನ್ನೂ ತನ್ನಿ!" ಎಂದನು.

ತಂದುದನ್ನೆಲ್ಲ ಗಣಿತಮಾಡಿ ಗುರುತುಹಾಕಿದ್ದ ತಾಮ್ರದ ಹಲಗೆ ಗಳ ಪ್ರಕಾರ, ಅದುವರೆಗೆ ಅವನು ನೆಲಕ್ಕೆ ಹಾಸಿದ ನಿಷ್ಕಗಳ ಬೆಲೆ ಹದಿ ನೆಂಟು ಕೋಟಿಯಾಗಿತ್ತು.

ಜೇತನು ಅದೆಲ್ಲವನ್ನೂ ಹಾಗೇ ನಿಂತು ನೋಡುತ್ತಿದ್ದನು. ಅನಾಥ ಪಿಂಡಿಕ ಅದುವರೆಗೆ ಕೊಟ್ಟದ್ದು ಸಾಲದೆಂದು ಇನ್ನೂ ಕೊಡಲು ಹವಣಿ ಸುತ್ತಿದ್ದುದನ್ನು ಕಂಡು, "ಪುಣ್ಯ ಸಂಪಾದನೆಗಾಗಿ ಈ ಶ್ರೇಷ್ಠಿ ಹಣವನ್ನು ಹೇಗೆ ವ್ಯಯಮಾಡುತ್ತಿದ್ದಾನೆ! ಇದುವರೆಗೆ ಇವನು ಕೊಟ್ಟಿರುವುದೇ ಸಾಕು. ಉಳಿದ ಭೂಮಿಯನ್ನು ನಾನು ಹಾಗೆಯೇ ಬಿಟ್ಟುಕೊಟ್ಟು, ನಾನೂ ಒಂದಿಷ್ಟು ಪುಣ್ಯ ಕಟ್ಟಿಕೊಳ್ಳುತ್ತೇನೆ." ಎಂದುಕೊಂಡನು.

"ಅನಾಥಪಿಂಡಿಕ, ಈ ಮಹಾಸಾಹಸವನ್ನು ಇನ್ನು ಸಾಕುಮಾಡು. ನಿನ್ನಿಂದ ಬರಬೇಕಾದ್ದೆಲ್ಲ ನನಗೆ ಬಂದಿತೆಂದು ಇದೋ ಘೋಷಿಸುತ್ತೇನೆ."

ಅನಂತರ ಅನಾಥಪಿಂಡಿಕನು, ಹೀಗೆ ತಾನು ಕೊಂಡುಕೊಂಡ ವನದಲ್ಲಿ ಬುದ್ಧನಿಗೋಸ್ಕರ ವಿಹಾರವನ್ನು ಕಟ್ಟಿಸತೊಡಗಿದನು. ಭಗ ವಂತನಿಗಾಗಿ ರಚನೆಯಾದ ಗಂಧಕುಟಿಯ ಸುತ್ತಲೂ ಭಿಕ್ಷುಗಳ ವಸತಿ ಏರ್ಪಟ್ಟಿತು. ಧ್ಯಾನಕ್ಕೆ ತಕ್ಕ ಎಡೆ, ಸ್ನಾನಕ್ಕೆ ತಕ್ಕ ಕೊಳ, ಪುಷ್ಪಫಲ ಗಳನ್ನು ನೀಡುವ ಉದ್ಯಾನ ಎಲ್ಲವೂ ಅಣಿಯಾದುವು. ಇದಿಷ್ಟರ ಸುತ್ತಲೂ ಹದಿನೆಂಟು ಹಸ್ತಗಳ ಎತ್ತರದ ದೊಡ್ಡ ಪ್ರಾಕಾರದ ಗೋಡೆ ಯೆದ್ದಿತು.

ಈ ವಿಹಾರ ನಿರ್ಮಾಣದ ಕಾರ್ಯಕ್ಕೆ ಮತ್ತೆ ಹದಿನೆಂಟು ಕೋಟಿ ಸುವರ್ಣಗಳ ವ್ಯಯವಾಯಿತು.

ನೀರಿನಂತೆ ವೆಚ್ಚಮಾಡಿದರು ಎಂದು ಮಾತಿಗೆ ಹೇಳುವುದಿಲ್ಲವೇ; ಆದರೆ ಅನಾಥಪಿಂಡಿಕನ ಬಿಡುಗೈಯಿನ ಮುಂದೆ ನೀರು ಖಂಡಿತವಾಗಿ ನಿಧಾನ.

ಹಣ ಇಷ್ಟು ಕೊಟ್ಟದ್ದು ಮಾತ್ರವಲ್ಲ. ವಿಹಾರವನ್ನೂ ವನವನ್ನೂ ನಿರ್ಮಾಣಮಾಡುವ ಕಾಲದಲ್ಲಿ ಅನಾಥಪಿಂಡಿಕನೂ ಅವನ ಸ್ನೇಹಿತರೂ ಬಂಧುಗಳೂ ಬಂದು, ಕೂಲಿಗಳ ಜೊತೆಯಲ್ಲಿ ತಾವೂ ಮೈಮುರಿಯ ನಿಂತು ದುಡಿದರು.

ಹೀಗೆ ಹಲವಾರು ರೀತಿಯಲ್ಲಿ ಜನಬಲ, ಧನಬಲಗಳು ವ್ಯಯವಾಗಿ ವಿಹಾರವು ಮೇಲೇಳುತ್ತಿದ್ದುದನ್ನು ಕಂಡು, ಜೇತನಿಗೂ ಉತ್ಸಾಹ ಉಕ್ಕಿ ಬಂದು, ಅವನು ಹೇಳಿದನು;

"ರಾಜಕುಮಾರನಾದ ನಾನು ಶ್ರೇಷ್ಠಿಯಾದ ನಿನ್ನಿಂದ ಹಣವನ್ನು ಪಡೆದುಕೊಂಡು ಏನು ಮಾಡಲಿ? ಅದು ನನಗೆ ಬೇಕಿಲ್ಲ. ನನಗೆ ನಿನ್ನಂತೆಯೇ ಪುಣ್ಯ ಸಂಪಾದನೆಮಾಡಬೇಕೆಂದು ಬಯಕೆಯುಂಟಾಗಿದೆ. ಆದ್ದರಿಂದ ಈ ವನಕ್ಕೆ ಮೌಲ್ಯವಾಗಿ ನೀನು ಕೊಟ್ಟಿರುವ ಹದಿನೆಂಟು ಕೋಟಿಗಳನ್ನು ಬಳಸಿ, ಈ ಆರಾಮದ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಮಹಾದ್ವಾರಗಳನ್ನು ಮಾಡಿಸಿ. ಅಲ್ಲಿಗೆ ನಾಲ್ಕು ಉನ್ನತವಾದ ಗೋಪುರ ಗಳನ್ನು ಎತ್ತಿಸುತ್ತೇನೆ."

ಹೀಗೆಂದುಕೊಂಡು, ಜೇತನು, ಆ ವಿಹಾರ ಆರಾಮಗಳಿದ್ದ ಪ್ರದೇ ಶದ ನಾಲ್ಕೂ ಕಡೆ ನಾಲ್ಕು ಗೋಪುರಗಳನ್ನು ಮಾಡಿಸಿದನು.

ಅಂದಿನಿಂದಾಗಿ ಅದನ್ನು "ಜೇತವನ" ಎಂದೂ "**ಅನಾಥಪಿಂಡಿಕನ ಆರಾಮ**" ಎಂದೂ ಜನ ಕರೆಯತೊಡಗಿದರು. ಈಗ ಯಾವ ಬೌದ್ಧ ಗ್ರಂಥವನ್ನು ಬೇಕಾದರೂ ತೆಗೆದು ನೋಡು: 'ಭಗವಾ ಸಾವತ್ಥಿಯಂ ವಿಹರತಿ ಜೇತವನೇ ಅನಾಥಪಿಂಡಿಕಸ್ಸ ಆರಾಮೇ' ಎಂದು ಹೆಜ್ಜೆ ಹೆಜ್ಜೆಗೂ ಪ್ರಯೋಗ ದೊರಕುತ್ತದೆ. ಎಂದರೆ 'ಭಗವಂತನು ಶ್ರಾವಸ್ತಿಯ ಜೇತವನದಲ್ಲಿ ಅನಾಥಪಿಂಡಿಕನ ಆರಾಮದಲ್ಲಿ ವಿಹರಿಸುತ್ತಿದ್ದನು' ಎಂದು ಅದಕ್ಕೆ ಅರ್ಥ. ಬುದ್ಧಗುರುವಿನ ಉಪದೇಶದಲ್ಲಿ ಮುಕ್ಕಾಲು ಮೂರು ವೀಸ ಈ ಸ್ಥಳದಲ್ಲಿ ನಡೆದು ಆದದ್ದೇ.

— ೩ —

ಜೇತವನದಲ್ಲಿ, ಅನಾಥಪಿಂಡಿಕನ ಆರಾಮದಲ್ಲಿ ವಿಹಾರವು ಸಿದ್ಧ ವಾಯಿತು. ಅತ್ತ ಭಗವಂತನು ಅನಾಥಪಿಂಡಿಕನಿಗೆ ಕೊಟ್ಟ ವಚನದಂತೆ ಅವನನ್ನು ಅನುಗ್ರಹಿಸುವುದಕ್ಕಾಗಿ ರಾಜಗೃಹದಿಂದ ಹೊರಟನು. ದಿನ ಕ್ಕೊಂದು ಯೋಜನದಂತೆ ನಡೆದು, ನಲವತ್ತೈದು ದಿವಸಗಳಲ್ಲಿ ಶ್ರಾವಸ್ತಿ ಯನ್ನು ಸೇರಿದನು.

ಭಿಕ್ಷುಸಂಘಕ್ಕೆ ವಿಹಾರವನ್ನು ಸಮರ್ಪಿಸುವ ಕಾರ್ಯವು ಬಹಳ ವೈಭವದಿಂದ, ತುಂಬ ಸಂಭ್ರಮದಿಂದ ನಡೆಯಿತು. ಅನಾಥಪಿಂಡಿ

ಕನೂ ಅವನ ಜೊತೆಗೆ ಅವನ ಹೆಂಡತಿ ಮಕ್ಕಳೂ, ಅವನ ಬಂಧು ಬಳಗದವರೂ, ಅವನ ಇಷ್ಟಮಿತ್ರರೂ, ಅದೇ ಊರಿನ ಇನ್ನಿತರ ಶ್ರೇಷ್ಠಿಗಳೆಲ್ಲರೂ ಆ ಉತ್ಸವದಲ್ಲಿ ಭಾಗವಹಿಸಿದರು. ಜೇತವನಕ್ಕೆ ಪ್ರವೇಶ ಮಾಡಿದ ದಿವಸ ತೊಡಗಿದ ಆ ಸಂಭ್ರಮ ಸುಮಾರು ಒಂಬತ್ತು ತಿಂಗಳು ಕಾಲ, ಮಳೆಗಾಲ ಬರುವವರೆಗು, ಒಂದೇ ಸಮನೆ ನಿಲ್ಲದೆ ನಡೆಯಿತು.

ಭಗವಂತನ ಮಹಾಗಂಧಕುಟಿಯ ಸುತ್ತಲೂ ಭಿಕ್ಷುಗಳ ವಾಸಕ್ಕೂ ಧ್ಯಾನಕ್ಕೂ ಅನುಕೂಲವಾದ ಅನೇಕ ವಸತಿಗಳು ವಿವಿಧವಾಗಿದ್ದುವು. ಅದರಲ್ಲಿ ಅನಾಥಪಿಂಡಿಕನು ಕಟ್ಟಿಸಿದುವೇ ಅನೇಕ. ಪ್ರಸೇನಜಿತನು ಕಟ್ಟಿಸಿದುವು ಕೆಲವು. ವಿಹಾರದ ಹೊರಗಡೆ ಒಂದು ದೊಡ್ಡ ರಾಜಾಯತನ ವೃಕ್ಷ. ವಿಹಾರವಿದ್ದ ಆ ಮಹಾವನದಲ್ಲಿ 'ಜೇತವನ ಪುಷ್ಕರಿಣಿ' ಯೆಂದು ಹೆಸರಾದ ದೊಡ್ಡದೊಂದು ಸರೋವರ. ವನದ ತುಂಬ ದಟ್ಟದಟ್ಟವಾಗಿ ಮರಗಳು ಬೆಳೆದು, ಅದು ಅರಣ್ಯವೆಂಬ ಭ್ರಾಂತಿಯುಂಟಾಗುತ್ತಿತ್ತು. ವಿಹಾರದ ಪ್ರಾಕಾರದಿಂದ ಹೊರಗೆ, ಅದರ ಪಕ್ಕದಲ್ಲಿ ಒಂದು ಮಾವಿನ ತೋಪು. ವಿಹಾರಕ್ಕೆ ಪ್ರವೇಶಮಾಡುವ ದ್ವಾರದ ಎದುರುಗಡೆಯಲ್ಲಿಯೇ ಅನಾಥಪಿಂಡಿಕನು ತರಿಸಿ ನೆಡಿಸಿದ ಬೋಧಿವೃಕ್ಷದ ಕೊಂಬೆಯೊಂದು ಆನಂದಬೋಧಿ ಎಂಬ ಹೆಸರಿನಿಂದ ಕಂಗೊಳಿಸುತ್ತಿತ್ತು.

ಅನ್ಯಮತದವರು ಭಗವಂತನ ಹೆಸರನ್ನು ಕೆಡಿಸಬೇಕೆಂದು ಸುಂದರಿಯೆಂಬವಳನ್ನು ಕೊಂದು, ಅವಳ ಹೆಣವನ್ನು ಜೇತವನದ ಕಾಡಿನಲ್ಲಿ ಹುಗಿದಿಟ್ಟು, ಒಮ್ಮೆ ಬುದ್ಧನನ್ನು ನಿಂದಿಸಿದ್ದರು. ಮತ್ತೊಮ್ಮೆ ಅದೇ ಅನ್ಯಮತದ ದುಷ್ಟರ ಮಾತು ಕೇಳಿಕೊಂಡು, ಚಿಂಚಾ ಎಂಬವಳು ಭಗವಂತನಿಂದ ತಾನು ಗರ್ಭವತಿಯಾದೆನೆಂದು ಅಪವಾದವನ್ನು ಆಡ ಬಂದು, ಆ ಪಾತಕದ ಫಲವಾಗಿ ಅವೀಚಿನರಕಕ್ಕೆ ಇಳಿದದ್ದು ಈ ಜೇತವನ ಪ್ರಾಂತದಲ್ಲೆ. ಇಲ್ಲಿ ಒಮ್ಮೆ ಭಗವಂತನಿಗೆ ವಿಷಪ್ರಾಶನ ಮಾಡಿಸಲು ದೇವದತ್ತನು ಯತ್ನಿಸಿ ವಿಫಲನಾದನು

ಜೇತವನದ ಹೊರಗಡೆಯ ಬಯಲಿನಲ್ಲಿ ಆಗಾಗ ಶ್ರಾವಸ್ತಿಯ ಮಕ್ಕಳು ಬಂದು ಆಡುವಾಡುವರಂತೆ. ಬಾಯಾರಿದಾಗ ಒಳಗೆ ಹೋಗಿ, ಪುಷ್ಕರಿಣಿಯಲ್ಲಿ ನೀರು ಕುಡಿಯುವರಂತೆ. ಒಂದು ಸಲ ಅವರ ಗುಂಪು

ಗಲಾಟೆ ಸ್ವಲ್ಪ ಹೆಚ್ಚಾಗಿ, ಭಿಕ್ಷುಗಳು ಆ ಮಕ್ಕಳನ್ನು ಗದರಿಕೊಂಡಾಗ ಭಗವಂತನು ಹೇಳಿದನಂತೆ: "ಮಕ್ಕಳು ಬರಲಿ, ಬಿಡಿ. ಗದರಿಕೊಂಡು ಅವುಗಳನ್ನು ಆಚೆ ಅಟ್ಟಬೇಡಿ"

ಜೇತವನವು ಶ್ರಾವಸ್ತಿಗೆ ಬಂದು-ಹೋಗುವ ರಾಜಮಾರ್ಗದ ಪಕ್ಕದಲ್ಲೇ ಇತ್ತಾದ್ದರಿಂದ, ಆ ಮಾರ್ಗವಾಗಿ ಸುಳಿಯುವ ಎಷ್ಟೋ ಪ್ರಯಾಣಿಕರು ಜೇತವನದ ತಂಪಾದ ನೆಳಲಿನಲ್ಲಿ ತಂಗಿ, ವಿಶ್ರಾಂತಿ ಪಡೆದು ಹೋಗುತ್ತಿದ್ದರು.

ಮುಂದೆ, ಭಗವಂತನ ಪರಿನಿರ್ವಾಣವಾಗುವುದಕ್ಕೆ ಮೊದಲೇ ಸಾರಿಪುತ್ರ ಮೌದ್ಗಲ್ಯಾಯನರೆಂಬ ಭಿಕ್ಷುಪ್ರಮುಖರು ಕಾಲವಾದಾಗ, ಅವರ ಅವಶೇಷಗಳನ್ನು ಒಳಕೊಂಡ ಸ್ತೂಪಗಳು ನಿರ್ಮಾಣವಾದದ್ದು ಇದೇ ಜೇತವನದ ಒಳಗಡೆಯೇ.

ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿ ಚೀನಾದೇಶದಿಂದ ಭಾರತಕ್ಕೆ ಬಂದ ಫಾಹಿಯಾನನು ಜೇತವನವನ್ನು ವರ್ಣಿಸಿದ್ದಾನೆ. ಜೇತವನದೊಳಗಿನ ವಿಹಾರಕ್ಕೆ ಏಳು ಉಪ್ಪರಿಗೆಗಳಿದ್ದುವಂತೆ. ಅದಕ್ಕೆ ಅನೇಕ ರೀತಿಯಾದ ತೋರಣ, ಬಾವುಟ, ಮುಂತಾದವುಗಳಿಂದ ಅಲಂಕಾರ ಮಾಡುತ್ತಿದ್ದರಂತೆ. ಹಗಲೂ ರಾತ್ರಿಯೂ ವಿಹಾರದ ತುಂಬ ದೀಪಗಳು ನಂದಾದೀಪವಾಗಿ ಉರಿಯುತ್ತಿದ್ದುವಂತೆ. ಒಂದು ದಿನ ಯಾವುದೋ ಇಲಿ, ಎಣ್ಣೆಯ ಮೇಲಿನ ಆಸೆಯಿಂದ ಬಂದು, ಉರಿಯುವ ಬತ್ತಿಗೆ ಬಾಯಿಹಾಕಿ ಕಚ್ಚಿಕೊಂಡು ಓಡಿದಾಗ, ಬಾವುಟ ತೋರಣಗಳಿಗೆ ಆ ಬೆಂಕಿ ತಾಗಿ, ಅದೇ ದೊಡ್ಡದಾಗಿ ಹಬ್ಬಿ ಹರಡಿ, ಏಳು ಅಂತಸ್ತಿನ ವಿಹಾರವನ್ನೂ ಸುಟ್ಟು ಭಸ್ಮವಾಗಿಹೋಯಿತಂತೆ. ಅನಂತರದ ಕಾಲದಲ್ಲಿ ಒಂದು ಎರಡು ಉಪ್ಪರಿಗೆಯ ವಿಹಾರವನ್ನು ಮತ್ತೆ ಕಟ್ಟಿಸಿದರಂತೆ. ಫಾಹಿಯಾನನು ಬಂದು ನೋಡುವ ಕಾಲಕ್ಕೆ ಜೇತವನವೆಲ್ಲ ಪಾಳು ಬಿದ್ದಿತ್ತು. ಪೂರ್ವದಲ್ಲಿ ಒಂದು, ಪಶ್ಚಿಮಕ್ಕೆ ಒಂದು, ಎರಡು ಮಹಾದ್ವಾರಗಳ ಗುರುತು ಇತ್ತು. ಫಾಹಿಯಾನನು ಆ ಪ್ರದೇಶದಲ್ಲಿ ಹಲವಾರು ಸ್ತೂಪಗಳನ್ನು ಕಂಡನು.

— ೪ —

ಅನಾಥಪಿಂಡಿಕನಿಗೆ ಮೂವರು ಹೆಣ್ಣುಮಕ್ಕಳು, ಒಬ್ಬನು ಗಂಡು ಮಗ. ಆ ಮಗನಿಗೆ ಮದುವೆಯಾಗಿ, ಸೊಸೆ ಮನೆಗೆ ಬಂದಿದ್ದಳು.

ಹೆಣ್ಣುಮಕ್ಕಳ ಹೆಸರು ದೊಡ್ಡ ಸುಭದ್ರೆ, ಚಿಕ್ಕ ಸುಭದ್ರೆ, ಮತ್ತು ಸುಮನಾ. ಮಗನ ಹೆಸರು ಕಾಳ. ಸೊಸೆಯಾದ ಸುಜಾತಾ ಧನಂಜಯ ಶ್ರೇಷ್ಠಿಯ ಕಿರಿಯ ಮಗಳು, ಎಂದರೆ ಮಿಗಾರಮಾತೆಯೆನ್ನಿಸಿದ ವಿಶಾಖೆಗೆ ಕೊನೆಯ ತಂಗಿ.

ಅನಾಥಪಿಂಡಿಕನು ತಾನು ಬುದ್ಧನಿಗೆ ಶರಣಾದ ಮೇಲೆ, ಬುದ್ಧನಿಗೂ ಆತನ ಭಿಕ್ಷುಸಂಘಕ್ಕೂ ಪರಿಚರ್ಯೆಮಾಡುವ ಭಾರವನ್ನು ಮೊದಲನೆಯ ಮಗಳಾದ ದೊಡ್ಡಸುಭದ್ರೆಗೆ ಒಪ್ಪಿಸಿದನು. ಅವಳು ಮದುವೆಯಾಗಿ ಗಂಡನ ಮನೆಗೆ ಹೋದಮೇಲೆ, ಆ ಕರ್ತವ್ಯಭಾರ ಅವಳ ತಂಗಿಯಾದ ಚಿಕ್ಕಸುಭದ್ರೆಯ ಪಾಲಿಗೆ ಬಂತು. ಅವಳಿಗೂ ಮದುವೆಯಾಗಿ, ಅವಳೂ ತನ್ನ ಗಂಡನ ಮನೆಗೆ ಹೋದಮೇಲೆ, ಸುಮನಾ ಭಿಕ್ಷುಸಂಘದ ಪರಿಚರ್ಯೆ ಮಾಡುತ್ತಿದ್ದಳು.

ಸುಮನಳಿಗೆ ಭಗವಂತನ ಭಿಕ್ಷುಸಂಘದಲ್ಲಿ ಭಕ್ತಿ. ಅವಳಿಗೆ ಗೃಹಜೀವನದಲ್ಲಿ ಅನುರಕ್ತಿ. ತಾನೂ ತನ್ನ ಅಕ್ಕಂದಿರಂತೆ ಯೋಗ್ಯನಾದವನನ್ನು ಕೈಹಿಡಿದು ಬಾಳಬೇಕೆಂಬ ಅವಳ ಆಸೆ ಈಡೇರಲಿಲ್ಲ. ಮನಸ್ಸಿಗೆ ಅದೇ ಒಂದು ಕೊರಗು ಹತ್ತಿ, ಸುಮನಾ, ಕಾಯಿಲೆ ಬಂದು, ಹಾಸಿಗೆ ಹಿಡಿದಳು.

ಮಗಳ ಅವಸ್ಥೆಯನ್ನು ಕಂಡು, ಅನಾಥಪಿಂಡಿಕನ ಕಣ್ಣುಗಳಲ್ಲಿ ನೀರು ಬಂತು. ಅದನ್ನು ಕಂಡು ಸುಮನಾ ಹೇಳಿದಳು :

"ವ್ಯರ್ಥವಾಗಿ ವ್ಯಥೆಪಡಬೇಡ, ತಮ್ಮಾಜಿ."

"ಏನು ಹೇಳಿದೆ, ಮಗು?"

"ವ್ಯರ್ಥವಾಗಿ ವ್ಯಥೆಪಡಬೇಡ, ತಮ್ಮಾಜಿ—ಎಂದೆ."

"ನಾನು ಯಾರು ತಿಳಿಯದೆ, ಮಗು? ನಾನು ನಿನ್ನ ತಂದೆ, ಅನಾಥಪಿಂಡಿಕ."

"ನೀನು ನನ್ನ ತಂದೆ. ಇದು ನನಗೆ ಗೊತ್ತು, ತಮ್ಮಾಜಿ."

ಅನಾಥಪಿಂಡಿಕನಿಗೆ ಅತಿಯಾದ ದುಃಖವಾಯಿತು. "ಮಗಳಿಗೆ ಬುದ್ಧಿ ಭ್ರಂಶವಾಗಿರಬೇಕು; ಇಲ್ಲದಿದ್ದರೆ, ತಂದೆಯಾದ ತನ್ನನ್ನು 'ತಮ್ಮಾಜಿ' ಎಂದು ಕರೆಯುತ್ತಿದ್ದಳೆ?" ಎಂದು ಅನಾಥಪಿಂಡಿಕನು ಕೊರಗಿದನು.

ಕೆಲವು ದಿವಸದಲ್ಲೇ ಸುಮನಾ ಕಣ್ಣುಮುಚ್ಚಿದಳು. ಅನಾಥ ಪಿಂಡಿಕನು ಅವಳ ಮರಣದಿಂದ ಹುಚ್ಚುಹಿಡಿದಹಾಗಾಗಿ, ಮನಸ್ಸಿಗೆ ಶಾಂತಿ ತರಬೇಕೆಂದು, ಭಗವಂತನ ಸನ್ನಿಧಿಗೆ ಹೋದನು.

ಭಗವಂತನು ಸುಮನಳ ಮರಣವನ್ನು ಕೇಳಿ, ಅನಾಥಪಿಂಡಿಕನ ಶೋಕವನ್ನು ನೋಡಿ, ಹೇಳಿದನು:

"ಮರಣವೆಂಬುದು ಎಲ್ಲರಿಗೂ ನಿಯತ. ಅದನ್ನು ಯಾರೂ ತಪ್ಪಿಸಿಕೊಳ್ಳಲಾಗುವುದಿಲ್ಲ. ವಸ್ತುಸ್ಥಿತಿ ಹೀಗಿರುವಾಗ, ಇದಕ್ಕಾಗಿ ದುಃಖಪಡುವುದು ನಿನ್ನಂಥವನಿಗೆ ತಕ್ಕದ್ದಲ್ಲ."

"ಬರಿಯ ಮರಣವಷ್ಟಕ್ಕಾಗಿ ನಾನು ಸಂಕಟಪಡುತ್ತಿಲ್ಲ, ಭಗವನ್. ಸಾಯುವ ಕಾಲಕ್ಕೆ ಸ್ವಲ್ಪ ದಿನಗಳ ಮುಂಚೆ, ಅವಳಿಗೆ ಬುದ್ಧಿ ವಿಕಲ್ಪ ವಾಯಿತಲ್ಲಾ ಎಂದು ನನಗೆ ಸಂಕಟವಾಗುತ್ತಿದೆ."

"ಯಾವ ಚಿಹ್ನೆಗಳನ್ನು ಕಂಡು, ಅವಳಿಗೆ ಬುದ್ಧಿವಿಕಲ್ಪವಾಯಿ ತೆಂದು ನಂಬುತ್ತೀಯೆ, ಅನಾಥಪಿಂಡಿಕ?"

"ಭಗವನ್! ಅದು ಮೊದಲು ನನ್ನನ್ನು ತಂದೆಯೆಂದು ಗುರುತಿಸಿ, ತಂದೆಯೆಂದು ಸಂಬೋಧಿಸುತ್ತಿದ್ದವಳು, ಈಗ ನನ್ನ ಗುರುತೇ ಗೊತ್ತಾ ಗದೆ, ನನ್ನನ್ನು 'ತಮ್ಮಾಜಿ! ತಮ್ಮಾಜಿ!' ಎಂದು ಸಂಬೋಧಿಸಿದಳು.

ಭಗವಂತನು ಆ ಮಾತನ್ನು ಕೇಳಿ, ಮೃದುವಾದ ನಗೆಯ ಬೆಳು ದಿಂಗಳನ್ನು ಬೀರಿ ಹೇಳಿದನು: "ಅನಾಥಪಿಂಡಿಕ! ಅದಕ್ಕಾಗಿ ನೀನು ಚಿಂತಿಸಬೇಡ. ಲೋಕಬಾಂಧವ್ಯದಲ್ಲಿ ನೀನು ಅವಳಿಗೆ ತಂದೆಯಾಗಿರು ವುದು ನಿಜವಾದರೂ ಧರ್ಮಬಾಂಧವ್ಯದಲ್ಲಿ ನೀನು ಅವಳಿಗೆ ತಮ್ಮ ನೆಂಬುದು ಅದೂ ನಿಜವೇ. ಏಕೆಂದರೆ ಕೇಳು: ಧರ್ಮವನ್ನು ಅವಲಂ ಬಿಸಿ ಆಚರಿಸಿದವರು ಪಡೆಯುವ ನಾಲ್ಕು ಫಲಗಳಲ್ಲಿ ಸ್ರೋತಾಪತ್ತಿ

ಫಲವೆಂಬುದು ಮೊದಲನೆಯದು, ಸಕೃದಾಗಾಮಿತ್ವವೆಂಬುದು ಎರಡನೆಯದು, ಅನಾಗಾಮಿತ್ವವೆಂಬುದು ಮೂರನೆಯದು, ಅರ್ಹತ್ವವೆಂಬುದೇ ನಾಲ್ಕನೆಯದು. ನೀನು ಇನ್ನೂ ಮೊದಲನೆಯ ಫಲವನ್ನು ಪಡೆದು ಸ್ರೋತಾಪನ್ನನಾಗಿರುವೆ. ನಿನ್ನ ಮಗಳಾದರೋ, ಎರಡನೆಯ ಫಲವನ್ನು ಪಡೆದು ಸಕೃದಾಗಾಮಿಯಾಗಿದ್ದಳು. ಆದ್ದರಿಂದ ಅವಳು ನಿನ್ನನ್ನು, ನೀನು ತಂದೆಯಾದರೂ, 'ತಮ್ಮಾಜಿ' ಎಂದು ಸಂಬೋಧಿಸಿ ಕರೆದದ್ದರಲ್ಲಿ ಏನೂ ವಿಕಲ್ಪವಿಲ್ಲ."

ಭಗವಂತನ ವಿವರಣೆಯನ್ನು ಕೇಳಿ, ಅನಾಥಪಿಂಡಿಕನ ಮನಸ್ಸು ಶಾಂತವಾಯಿತು.

ಹೀಗೆ, ಅನಾಥಪಿಂಡಿಕನ ಮೂವರು ಹೆಣ್ಣುಮಕ್ಕಳೂ ಭಗವಂತನಲ್ಲಿ ಭಕ್ತಿಯಿಂದಿದ್ದವರಾದರೂ, ಅವನ ಮಗನಾದ ಕಾಳ ಮಾತ್ರ ಅತ್ತ ಮನಸ್ಸುಕೊಡುತ್ತಿರಲಿಲ್ಲ, ವಿಹಾರದ ಕಡೆಗೂ ಸುಳಿಯುತ್ತಿರಲಿಲ್ಲ.

ಒಂದು ಸಲ ಅನಾಥಪಿಂಡಿಕ, ಸಾಮೋಪಾಯದಿಂದ ಮಗ ಹೇಳಿದ ಮಾತು ಕೇಳದುದಕ್ಕೆ ಚಿಂತಿಸಿ, ದಾನೋಪಾಯವನ್ನು ಆಶ್ರಯಿಸಿದನು.

"ಮಗನೆ, ಕಾಳ. ನೀನು ಈಯೊಂದು ಸಂಜೆ, ಭಗವಂತನು ಸಭೆಗೆ ಉಪದೇಶಮಾಡುವ ಹೊತ್ತಿನಲ್ಲಿ ಅಲ್ಲಿ ಹೋಗಿ ಇದ್ದರೆ, ನಿನಗೆ ಒಂದು ನೂರು ಹೊನ್ನು ಕೊಡುತ್ತೇನೆ."

"ಖಂಡಿತ ಕೊಡುತ್ತೀಯಾ, ಅಪ್ಪ? ನಿಜವಾಗಿ?"

"ಖಂಡಿತ ಕೊಡುತ್ತೇನೆ. ನಿಜವಾಗಿ."

ಕಾಳನು ಆ ದಿನ ಸಂಜೆಗೆ ಧರ್ಮಸಭೆಯಲ್ಲಿ ಹೋಗಿ ಕುಳಿತನು. ಅವನ ದೇಹವೇನೋ ಅಲ್ಲಿತ್ತು, ಮನಸ್ಸು ಮಾತ್ರ ಎಲ್ಲೋ ಇತ್ತು. ಸಭೆ ಮುಗಿದಕೂಡಲೆ, ಮನೆಗೆ ಬಂದು, ತಂದೆಯ ಎದುರಿಗೆ ಕೈಯೊಡ್ಡಿ ನಿಂತನು.

"ಸಭೆಯಲ್ಲಿ ಏನು ಕೇಳಿ ಬಂದೆ, ಕಾಳ?"

"ಅದು ಏನೇನೋ ಹೇಳಿದರು. ಅದು ಯಾರಿಗೆ ಗೊತ್ತು? ನಾನಂತೂ ಅಲ್ಲಿ ಹೋಗಿ ಇದ್ದೆ. ಕೊಡು, ನೂರು ಹೊನ್ನು."

ಅನಾಥಪಿಂಡಿಕನು ತಾನು ಆಡಿದಂತೆ ನೂರು ಹೊನ್ನನ್ನು ಮಗನ ಕೈಯಲ್ಲಿಟ್ಟು, ಹೇಳಿದನು :

"ಕೇಳು, ಕಾಳ. ಈ ದಿನ ಮತ್ತೆ ಸಭೆಗೆ ಹೋಗಿ, ಯಾವುದಾದರೂ ಬುದ್ಧವಚನವನ್ನು ಕಲಿತು, ಆ ವಚನದ ಪದಗಳನ್ನೂ ಅದರ ಅರ್ಥವನ್ನೂ ತಿಳಿದು ಬಂದರೆ, ನಿನಗೆ ಸಾವಿರ ಹೊನ್ನು ಕೊಡುತ್ತೇನೆ."

ಕಾಳನು ಆಗಲೆಂದು ಆ ಸಂಜೆ ಸಭೆಗೆ ಹೋದನು. ಮನಸ್ಸಿಟ್ಟು ಮೊದಲನೆಯ ಬುದ್ಧವಚನವನ್ನು ಕೇಳಿದನು. ಪದ ಖಚಿತವಾಯಿತು, ಅರ್ಥ ತಿಳಿಯಾಯಿತು. ಎದ್ದು ಹೊರಡೋಣವೆಂದುಕೊಳ್ಳುವಷ್ಟರಲ್ಲಿಯೇ ಅದುವರೆಗೆ ಕೇಳಿದ್ದು, ತಿಳಿದದ್ದು ಎಲ್ಲಾ ಮರೆತುಹೋಯಿತು. ಎರಡನೆಯ ವಚನಕ್ಕೂ ಹಾಗೆಯೇ ಆಯಿತು : ಬಾಯಿಗೆ ಬಂತು, ಅರ್ಥವಾಯಿತು, ಹೋಗೋಣ ಎನ್ನುವ ವೇಳೆಗೆ ಎಲ್ಲಾ ಮರೆತು ಹೋಯಿತು. ಹೀಗಾಗಿ, ಕಾಳನು ಸಭೆ ಮುಗಿಯುವವರೆಗೂ ಅಲ್ಲಿ ಕುಳಿತಿದ್ದು, ಒಂದೊಂದು ಬುದ್ಧವಚನವನ್ನೂ ಅದರ ಅರ್ಥಸಹಿತವಾಗಿ ಕಲಿತು, ಕಲಿತಕೂಡಲೇ ಮರೆತು, ಸಭೆ ಮುಗಿದಒಡನೆಯೇ ಕೇಳಿದ್ದೆಲ್ಲವನ್ನೂ ಜಲಕ್ಕನೆ ಜ್ಞಾಪಿಸಿಕೊಂಡನು.

ಅವನು ಹಾಗೆ ಮರೆತದ್ದು ಏಕೆ? ಅದೆಲ್ಲಾ ಅವನಿಗೆ ಮತ್ತೆ ಜ್ಞಾಪಕವಾದದ್ದು ಹೇಗೆ? ಅದು ಎಲ್ಲವೂ ಭಗವಂತನ ಸಂಕಲ್ಪ, ಭಗವಂತನ ಪ್ರಭಾವ. ಕೇಳಿದುದು ಒಂದು ವಶವಾದೊಡನೆಯೇ ಅವನು ಎದ್ದು ಹೊರಟುಬಿಡಬಾರದು, ಇನ್ನೂ ನಿಂತು ಇನ್ನೂ ಕೇಳಬೇಕು, ಎಂಬ ಉದ್ದೇಶದಿಂದ ಭಗವಂತನ ಸಂಕಲ್ಪವು ಅವನಿಗೆ ತಾತ್ಕಾಲಿಕವಾದ ಮರವನ್ನು ಉಂಟುಮಾಡಿ, ಅವನಿಗೆ ಸರ್ವಕಾಲಿಕವಾದ ನೆನಪನ್ನು ತಂದು ಉದ್ಧಾರಮಾಡಿತು.

ಸಭೆಯೆಲ್ಲ ವಿಸರ್ಜನೆಯಾಗುವ ವೇಳೆಗೆ, ಅಲ್ಲಿಯೇ ಬಂದು ಕುಳಿತಿದ್ದ ಅನಾಥಪಿಂಡಿಕನು ಎದ್ದು ಬಂದನು. ಭಗವಂತನಿಗೆ ವಂದಿಸಿ, ಭಗವಂತನ ಸಮುಖದಲ್ಲಿಯೇ ಮಗನನ್ನು ಮಾತನಾಡಿಸಿದನು :

"ಎಲ್ಲಿ, ಕಾಳ? ಯಾವ ಒಂದು ಬುದ್ಧವಚನವನ್ನು ನೀನು ಇಲ್ಲಿ ಕಲಿತೆ? ಹೇಳು."

ಕಾಳನು ತಾನು ಕಲಿತ —ಒಂದಲ್ಲ—ಹತ್ತು ವಚನಗಳನ್ನು ಪದ ಪದಾರ್ಥ ಸಹಿತವಾಗಿ ತಂದೆಗೆ ಒಪ್ಪಿಸಿದನು. ಅನಾಥಪಿಂಡಿಕನಿಗೆ ಬಹಳ ಸಂತೋಷವಾಯಿತು. ತಾನು ಹೇಳಿದ ಸಾವಿರ ಚಿನ್ನವನ್ನು ಮಗನ ಕೈಯಲ್ಲಿ ಇಡಹೋದನು. ಆದರೆ ಆ ಮಗ ಅದನ್ನು ಸ್ವೀಕರಿಸಲು ಕೈ ಮುಂದೆ ತಾರದೆ, ತಂದೆಯ ಬಳಿ ವಿಜ್ಞಾಪಿಸಿದನು :

"ಈ ದಿವಸ ನಾನು ಪಡೆದ ಚಿನ್ನವನ್ನು ಪಡೆದವನು ಬೇರೆ ಯಾವ ತರದ ಚಿನ್ನಕ್ಕೂ ಆಸೆ ಪಡುವುದಿಲ್ಲ. ತಂದೆಯೇ, ನೀನು ಈ ನಶ್ವರವಾದ ಚಿನ್ನದ ಆಸೆಯನ್ನು ನನಗೆ ತೋರಿಸಿ, ಶಾಶ್ವತವಾದ ಚಿನ್ನವನ್ನು ನೀನು ನನಗೆ ಗಳಿಸಿಕೊಟ್ಟಿರುವೆ."

"ಈ ದಿವಸ ನಾನು ಯಥಾರ್ಥವಾಗಿ ಪುತ್ರವಂತನಾದೆ." ಎಂದು ಅನಾಥಪಿಂಡಿಕನು ಕೃತಕಾರ್ಯನಾದವನಂತೆ ತೃಪ್ತಿಯಿಂದ ನುಡಿದನು.

ಭಗವಂತನು ಆ ತಂದೆಮಕ್ಕಳ ಮಾತನ್ನು ಅನುಮೋದಿಸಿ, ಇಬ್ಬರನ್ನೂ ಆಶೀರ್ವದಿಸಿದನು.

ಈ ಮಗನ ಹೆಂಡತಿ ಸುಜಾತಾ, ತಂದೆಯ ಮನೆಯವರು ಮುದ್ದು ಮಾಡಿದ ಬೆಳಸಿದ ಮಗಳು. ಅತ್ತೆಯ ಮನೆಗೆ ಬಂದರೂ, ಅತ್ತೆ ಮಾವಂದಿರಲ್ಲಿ ಭಕ್ತಿ ಇದ್ದರೂ, ಗಂಡನಲ್ಲಿ ಪ್ರೀತಿಯಿದ್ದರೂ, ಇನ್ನೂ ಹುಡುಗಿತನ ಹೋಗಿರಲಿಲ್ಲ. ಹೇಳಿದ್ದಕ್ಕೆ ಎದುರುಮಾತು ಹೇಳುವುದು, ಆಳುಗಳನ್ನು ಗದರಿಸುವುದು, ದರ್ಪದಿಂದ ಧೋರಣೆಯಿಂದ ವರ್ತಿಸುವುದು, ಅವಳಿಗೆ ಸಹಜವಾಗಿಹೋಗಿತ್ತು. ಕಂಡವರ ಮನೆಯಿಂದ ತಂದ ಹೆಣ್ಣಿನ ಮನಸ್ಸು ನೋಯಿಸಬಾರದೆಂದು ಅನಾಥಪಿಂಡಿಕನು ಅವಳ ವರ್ತನೆಯನ್ನೆಲ್ಲ ಸಹಿಸಿಕೊಂಡಿದ್ದನು. ಏನು ಮಾಡಬೇಕೋ ತೋಚದೆ ಸುಮ್ಮನೆ ಇದ್ದನು.

ಆಗ ಒಂದು ದಿವಸ ಭಗವಂತನು ಅನಾಥಪಿಂಡಿಕನ ಮನೆಗೆ ಬಂದ ಹೊತ್ತಿನಲ್ಲಿ, ಒಳಗೆ ಸುಜಾತೆಯ ಗಂಟಲು ದೊಡ್ಡದಾಗಿ ಕೇಳಿಸುತ್ತಿತ್ತು.

"ಏನಿದು, ಅನಾಥಪಿಂಡಿಕ? ಒಳಗೆ ಏನಿದು ಸಂತೆ?"

"ಭಗವನ್! ನನ್ನ ಸೊಸೆ ಸುಜಾತಾ ಹೇಳಿದಂತೆ ಕೇಳುವುದಿಲ್ಲ!"

"ಹೋಗಿ, ನಾನು ಕರೆದೆನೆಂದು ಹೇಳು, ಅನಾಥಪಿಂಡಿಕ!"

ಭಗವಂತನು ತನ್ನನ್ನು ಕರೆದನೆಂಬುದನ್ನು ಕೇಳಿ, ಕೂಡಲೆ ಸುಜಾತಾ ಅಡಕವಾಗಿ ಬಂದು, ಭಗವಂತನಿಗೆ ವಂದಿಸಿ, ಒಂದು ಕಡೆ ನಿಂತಳು.

"ಬಾ, ಇಲ್ಲಿ. ಕುಳಿತುಕೊ, ಸುಜಾತಾ."

ಸುಜಾತಾ ಒಂದು ಕಡೆ ಗೌರವದಿಂದ ವಿನಯದಿಂದ ಕುಳಿತಳು.

ಭಗವಂತನು ಹೇಳಿದನು :

"ನೋಡು, ಸುಜಾತಾ : ಮನೆಯ ಹೆಂಡಿರಲ್ಲಿ ಹಲವಾರು ತೆರ. ಒಬ್ಬಳು ಕೊಲೆಪಾತಕಿಯಂಥವಳು, ಇನ್ನೊಬ್ಬಳು ಇದ್ದುದನ್ನು ದೋಚಿಕೊಂಡು ಹೋಗುವಂಥವಳು, ಮತ್ತೊಬ್ಬಳು ಮನೆಗೆ ಹೊಕ್ಕ ಶತ್ರುವಿನಂಥವಳು, ಬೇರೊಬ್ಬಳು ಗಂಡನ ಪಾಲಿಗೆ ತಾಯಿಯಂತೆ ವರ್ತಿಸುವವಳು, ಮಗದೊಬ್ಬಳು ಸಖಿಯಂತೆ ನಡೆದುಕೊಳ್ಳುವವಳು, ಇನ್ನೊಬ್ಬಳು ಗಂಡನ ಮನೆಯಲ್ಲಿ ದಾಸಿಯಂತೆ ಬದುಕುವವಳು. ಇಂಥ ಹೆಂಡಿರಲ್ಲಿ ಮೊದಲನೆಯ ವರ್ಗದವರಿಂದ ಯಾವ ಮನೆಯೂ ಊರ್ಜಿತವಾಗುವುದಿಲ್ಲ, ಅಂಥ ಹೆಂಡಿರಿಗೆ ಇಹದಲ್ಲಿಯಾಗಲಿ ಪರದಲ್ಲಿಯಾಗಲಿ ಶ್ರೇಯಸ್ಸಿಲ್ಲ. ಆದರೆ, ಸುಜಾತಾ, ಅನಂತರ ಹೇಳಿದಂತಹ ವರ್ಗದ ಹೆಂಡಿರು ಯಾವ ಮನೆಯಲ್ಲಿರುವರೋ ಆ ಮನೆ ಖಂಡಿತ ಊರ್ಜಿತವಾಗುತ್ತದೆ, ಅಂಥ ಹೆಂಡಿರಿಗೆ ಇಹದಲ್ಲಿಯೂ ಪರದಲ್ಲಿಯೂ ಶ್ರೇಯಸ್ಸುಂಟು. ಈಗ ಹೇಳು, ಸುಜಾತಾ : ನೀನು ಎಂತಹ ಹೆಂಡತಿಯಾಗಿ ಬದುಕಬೇಕೆಂದು ನಿನಗೆ ಎನ್ನಿಸುತ್ತದೆ?"

ಸುಜಾತಾ ಕೈ ಮುಗಿದು ವಿಜ್ಞಾಪಿಸಿದಳು :

"ಭಗವನ್! ಇಂದಿನಿಂದ ನಾನು ಈ ಮನೆಯಲ್ಲಿ ದಾಸಿಯಾಗಿರುವಂಥ ಹೆಂಡತಿಯಾಗಿ ಬದುಕುತ್ತೇನೆ."

ಅಂದಿನಿಂದ ಅನಾಥಪಿಂಡಿಕನ ಮನೆ ಬಂಗಾರವಾಯಿತು.

— ೫ —

ಅನಾಥಪಿಂಡಿಕನು ನಿಃಸ್ವಾರ್ಥಿಯಾಗಿ, ಇದ್ದ ದ್ರವ್ಯವನ್ನೆಲ್ಲಾ ಧರ್ಮಕಾರ್ಯಗಳಿಗೆ ವ್ಯಯಮಾಡಿ ಮಾಡಿ, ಒಂದು ಕಾಲಕ್ಕೆ ನಿರ್ಗತಿಕ ನೆನ್ನುವ ಸ್ಥಿತಿಗೆ ಬಂದನು. ಹಕ್ಕಿಗಳಿಗೆ ಎಸೆಯುವ ಕಾಳು, ಹುಳಿ ಗಂಜಿ ಹೊರತಾಗಿ ಭಿಕ್ಷುಸಂಘಕ್ಕೆ ಬೇರೇನನ್ನೂ ನೀಡಲಾರದ ಸ್ಥಿತಿಗೆ ಒಮ್ಮೆ ಬಂದಿದ್ದನು. ಆದರೂ ಭಿಕ್ಷುಸಂಘಕ್ಕೆ ನೀಡಬೇಕೆಂಬ ಅವನ ಶ್ರದ್ಧೆಗೆ ಚ್ಯುತಿ ಬರಲಿಲ್ಲ. ಇದ್ದುದನ್ನು ಇಲ್ಲವೆನ್ನದೆ ನಿರ್ವಂಚನೆಯಿಂದ ಸಂಘದ ಸೇವೆಯನ್ನು ಮಾಡಿದನು ಚಕ್ರಗಳ ಅರಪಂಕ್ತಿ ಒಮ್ಮೆ ಕೆಳಗೆ ಹೋದದ್ದು ಮತ್ತೆ ಮೇಲೆ ಬರುವುದಿಲ್ಲವೇ, ಹಾಗೆಯೇ ಅನಾಥಪಿಂಡಿಕನ ಭಾಗ್ಯಪಂಕ್ತಿ ಮತ್ತೆ ಮೇಲುಮುಖವಾಯಿತು.

ಅನಾಥಪಿಂಡಿಕನು ನಿತ್ಯವೂ ಎರಡು ಬಾರಿ ಭಗವಂತನ ದರ್ಶನಕ್ಕೆ ಸ್ನೇಹಿತವರ್ಗದೊಡನೆ ಹೋಗಿ ಬರುವನು. ಹೋಗುವಾಗಲೆಲ್ಲ ಭಿಕ್ಷು ಗಳಿಗಾಗಿ ಏನಾದರೂ ತೆಗೆದುಕೊಂಡೇ ಹೋಗುವನು. ಅನ್ನವೋ, ಔಷಧವೋ, ಗಂಧವೋ, ಪುಷ್ಪವೋ, ವಸ್ತ್ರವೋ ಏನಾದರೂ ಇಲ್ಲದೆ, ಎಂದೂ ಬರಿಗೈಯಲ್ಲಿ ಹೋದವನಲ್ಲ. ಆದರೂ, ಒಂದು ಸಲವಾದರೂ ಅವನಿಗೆ ಬುದ್ಧನನ್ನು ಧರ್ಮೋಪದೇಶಕ್ಕಾಗಿ ಪ್ರಾರ್ಥಿಸಬೇಕೆಂದು ಅನ್ನಿ ಸುತ್ತಿರಲಿಲ್ಲ. ಕೋಮಲಕಾಯನಾದ ಭಗವಂತನಿಗೆ ಶ್ರಮವಾಗಬಾರದು ಎಂಬ ದಾಕ್ಷಿಣ್ಯವೊಂದುಕಡೆ, ತಾನು ನೀಡಿದ ಭಿಕ್ಷೆಗೆ ಪ್ರತಿಯಾಗಿ ಪರಿಹಾರವನ್ನು ಕೇಳಿದಂತಾದೀತು ಎಂಬ ಸಂಕೋಚವೊಂದುಕಡೆ. ಹೀಗೆ, ಅವನಾಗಿಯೇ ಬಾಯಿಬಿಟ್ಟು ಏನು ಕೇಳದೆ ಹೋದರೂ, ಭಗ ವಂತನೇ ಆತನ ಅಭಿವೃದ್ಧಿಗೆ ಅಗತ್ಯವೆನಿಸಿದ ಧರ್ಮವಿಷಯಗಳನ್ನು ಹಿತಸುಖಗಳಾಗಲೆಂದು ತಿಳಿದು ಬೋಧಿಸುತ್ತಿದ್ದನು. ಗೋಡೆ ಮೇಲು ಛಾವಣಿ ಮುಂತಾದುವು ಭದ್ರವಾಗಿದ್ದ ಮನೆಗೆ ಮಳೆ ಹೇಗೆ ನುಗ್ಗಲಾ ರದೋ ಹಾಗೆ ಚೆನ್ನಾಗಿ ರಕ್ಷಣೆ ಮಾಡಿದ ಚಿತ್ತದಲ್ಲಿ ರಾಗದ್ವೇಷಗಳು ಒಂದು ಹಾವಳಿ ಮಾಡಲಾರವು, ಎಂದು ಒಮ್ಮೆ; ಶ್ರದ್ಧೆಯಿಂದ ಕೊಟ್ಟ ಆಹಾರ ವನ್ನು ಸೌಮನಸ್ಯದಿಂದ ಸ್ವೀಕರಿಸಿದವನಿಗೆ ಆಯುಸ್ಸು, ಆರೋಗ್ಯ,

ಬಲ, ಸುಖಗಳು ಪ್ರಾಪ್ತವಾಗುತ್ತವೆ ಎಂದು ಇನ್ನೊಮ್ಮೆ; ಗೃಹಸ್ವಾಮಿ ಯಾದವನ ಕರ್ತವ್ಯಗಳು ಯಾವುವೆಂದರೆ—ಗೃಹತ್ಯಾಗ ಮಾಡಿರುವವರಿಗೆ ವಸ್ತ್ರವನ್ನೂ ಆಹಾರವನ್ನೂ ವಿಹಾರವನ್ನೂ ಔಷಧಗಳನ್ನೂ ಒದಗಿಸು ವುದು. ಎಂದು ಬೇರೊಂದು ಕಡೆ; ನ್ಯಾಯವಾಗಿ ಹಣ ಸಂಪಾದಿಸುವುದು ಕಷ್ಟ, ಒಳ್ಳೆಯ ಕೀರ್ತಿ ಪಡೆಯುವುದು ಕಷ್ಟ, ದೀರ್ಘಕಾಲ ಬದುಕು ವುದು ಕಷ್ಟ, ಒಳ್ಳೆಯ ಗತಿಯಾಗುವುದು ಕಷ್ಟ, ಎಂದು ನಾಲ್ಕು ವಿಧದ ದುರ್ಲಭಗಳನ್ನು ಕುರಿತು ಬೇರೊಂದು ಸಂದರ್ಭದಲ್ಲಿ;—ಇಂಥ ಎಷ್ಟೋ ಬೋಧನೆಗಳನ್ನು ಭಗವಂತನು ಅನಾಥಪಿಂಡಿಕನ ಮನಸ್ಸಿನ ಅನುವನ್ನು ಅರಿತು ಅವನಿಗೆ ಬೋಧೆಮಾಡಿದನು.

ಅನಾಥಪಿಂಡಿಕನು ಭಗವಂತನಿಗೆ ಮೊದಲೇ ತೀರಿಕೊಂಡನು. ಅವನು ದೇಹದ ಆರೋಗ್ಯ ಕೆಟ್ಟು ಹಾಸಿಗೆ ಹಿಡಿದು ಮಲಗಿರುವಾಗ, ಧರ್ಮಕಥನವನ್ನು ಕೇಳಬೇಕೆಂದು ಆಸೆಪಟ್ಟನು. ಭಗವಂತನಿಗೆ ಹೇಳಿ ಕಳುಹಿಸುವುದಕ್ಕೆ ಮತ್ತೆಯೂ ದಾಕ್ಷಿಣ್ಯಪಟ್ಟು, ಸಾರಿಪುತ್ರನನ್ನು ಬರು ವಂತೆ ಪ್ರಾರ್ಥಿಸಿಕೊಂಡನು. ಸಾರಿಪುತ್ರನು ಆನಂದನ ಜೊತೆಯಲ್ಲಿ ಅನಾಥಪಿಂಡಿಕನ ಮನೆಗೆ ಬಂದು, ಅವನಿಗೆ ಧರ್ಮವನ್ನು ಕುರಿತು ಮಾತನಾಡಿದನು. ಶೀಲವನ್ನು ಕುರಿತು, ದಾನವನ್ನು ಕುರಿತು. ಅನಾಥ ಪಿಂಡಿಕನು ಅದುವರೆಗೂ ಆಚರಿಸಿದ್ದ ಶೀಲಗಳನ್ನೂ ದಾನಗಳನ್ನೂ ಕುರಿತು ಬೋಧಿಸಿದನು. ಆರ್ಯ ಸಾರಿಪುತ್ರನ ಬೋಧೆಯನ್ನು ಕೇಳುತ್ತ ಕೇಳುತ್ತ, ತನ್ನ ಅದುವರೆಗಿನ ಬದುಕನ್ನು ಹಾಗೇ ವಿಮರ್ಶೆಮಾಡಿ ಕೊಳ್ಳುತ್ತ, ಅವನ ಮನಸ್ಸು ಸಮಾಧಾನವಾಯಿತು.

ಅನಾಥಪಿಂಡಿಕನು ತನ್ನ ಇಹಜೀವನದಲ್ಲಿ ಕಡೆಯ ಕೃತ್ಯವಾಗಿ ಆರ್ಯರಾದ ಆ ಸಾರಿಪುತ್ರ ಆನಂದ ಇಬ್ಬರಿಗೂ ಆ ದಿನ ತನ್ನ ಮನೆ ಯಲ್ಲೇ ಭಿಕ್ಷೆಯಿಕ್ಕಿ ತಣಿದನು ಅದೇ ದಿನ, ಸಮಾಧಾನಗೊಂಡ ಮನಸ್ಸಿ ನಿಂದ ತನ್ನ ಕಳೇಬರವನ್ನು ಕಳಚಿಹಾಕಿ, ತುಶಿತವೆಂಬ ಸ್ವರ್ಗದಲ್ಲಿ ದೇವತೆಯಾಗಿ ಹುಟ್ಟಿದನು.

---

ಜಿ. ಶ್ರೀನಿವಾಸ ಅಯ್ಯಂಗಾರ್, ಪ್ರಿಂಟರ್ ಮತ್ತು ಪಬ್ಲಿಷರ್, ಬೆಂಗಳೂರು ಸಿಟಿ.

# ಜಿ. ಪಿ. ರಾಜರತ್ನಂ ಅವರ ಪುಸ್ತಕಗಳು

(ನಮ್ಮ ಪ್ರಕಟನೆಗಳು)

೧. **ಮಾತಿನ ಮಲ್ಲಿ** ಒಂದೂಮುಕ್ಕಾಲು ರೂಪಾಯಿ.

ಸತಿಪತಿಯರಿಗೆ ಸಂಬಂಧಿಸಿದ ಶುಚಿಯಾದ ಶೃಂಗಾರವನ್ನು ಜೇನು ತುಪ್ಪದ ಮಳೆ ತೊಟ್ಟಿಕ್ಕಿದ ಹಾಗೆ ಚಿತ್ರಿಸುವ ಚೆಲುವಾದ ಕಥೆ. ಹಳೆಯ ಕಾಲದ ಬಣ್ಣಬಣ್ಣದ ಜೀವನವನ್ನು, ಹಳೆಯ ಕವಿಯೊಬ್ಬನು ಚಿತ್ರಿಸಿದ ಮಾಯಕವನ್ನು ಕಾಣಬೇಕಾದರೆ. ಈ ಕಥೆ ಓದಬೇಕು.

೨. **ಕರಿಯ ಕಂಬಳಿ** ಒಂದೂಮುಕ್ಕಾಲು ರೂಪಾಯಿ.

ರಾಜರತ್ನಂ ಹಿಂದೆ ಬರೆದ ಕೆಲವು ಕತೆಗಳನ್ನು ಇಲ್ಲಿ ಪುನರ್ಮುದ್ರಣ ಮಾಡಿದೆ. ಅದರ ಜೊತೆಗೆ ಪ್ರಸಿದ್ಧನಾದ ಫ್ರೆಂಚ್ ಭಾಷೆಯ ವಾಲ್ಟೇರ್ ಎಂಬ ಮಹಾಕವಿಯಿಂದ ಆಯ್ದ ನಾಲ್ಕು ಲೋಕೋತ್ತರವಾದ ಕತೆಗಳ ಅನುವಾದವೂ ಇಲ್ಲಿ ಇದೆ. ವ್ಯಂಗ್ಯ ಹಾಸ್ಯದಲ್ಲಿ ಅಭಿರುಚಿಯಿರುವವರಿಗೆ ಈ ಸಂಕಲನವು ಖಂಡಿತ ಪ್ರಿಯವಾಗುತ್ತದೆ.

೩. **ಕಲ್ಲಿನ ಕಾಮಣ್ಣ** ಎರಡೂಕಾಲು ರೂಪಾಯಿ.

ಕಾಮ ಮತ್ತು ಪ್ರೇಮ—ಇವುಗಳ ಅಂತರವನ್ನೂ, ಇವುಗಳ ಅನಂತವಾದ ಮುಖಗಳಲ್ಲಿ ಒಂದೆರಡು ಮೂರನ್ನೂ ಈ ಪುಸ್ತಕ ಪರಿಚಯ ಮಾಡಿಕೊಡುತ್ತದೆ. ಹಾಗೆ ಮಾಡಿಕೊಡಬೇಕೆಂಬ ಉದ್ದೇಶದಿಂದ ಕೆಲವು ಪ್ರಸಿದ್ಧವಾದ ಉದಾಹರಣೆಗಳನ್ನು ನಮ್ಮ ದೇಶದ, ಇತರ ದೇಶದ ಸಾಹಿತ್ಯಗಳಿಂದ ಆಯ್ದು, ಈ ಸೊಗಸಾದ ಮಾಲೆಯನ್ನು ಮಾಡಲಾಗಿದೆ. ಸಾವಿರಾರು ವರ್ಷಗಳಿಂದ ಪ್ರಿಯವಾಗಿರುವ ಈ ಕತೆಗಳು ಸಾವಿರಾರು ಜನರಿಗೆ ಈಗಲೂ ಸಂತೋಷ ಕೊಡುವಂಥವು.

**೪. ಹತ್ತು ಮಕ್ಕಳ ತಾಯಿ** ಎರಡೂಕಾಲು ರೂಪಾಯಿ.

ಇದು ಕೆಣಕುವ ಪುಸ್ತಕ ಅಲ್ಲ, ಕೆರಳಿಸುವ ಪುಸ್ತಕ ಅಲ್ಲ; ಓದುವುದರಿಂದ ಮನಸ್ಸು ಪ್ರಸನ್ನವಾಗಬೇಕು ಎಂದು ಬಯಸುವವರು, ಈ ಪುಸ್ತಕವನ್ನು ಎತ್ತಿಕೊಳ್ಳಬೇಕು. ಭಗವಂತನಾದ ಬುದ್ಧನ ಸಮಕಾಲೀನರಾಗಿದ್ದ ಹತ್ತಾರು ಮಹಾಪುರುಷರನ್ನು ಈ ಪುಸ್ತಕ ಪ್ರಸ್ತಾಪಿಸಿ, ಅವರು ನೆಯ್ದ ಒಂದು ಅದ್ಭುತವಾದ ಕಥೆಯ ಒಲೆಯನ್ನು ಈಗಿನ ಕಾಲಕ್ಕೆ ತಕ್ಕ ನಿರೂಪಣೆಯಲ್ಲಿ ಬೀಸುತ್ತದೆ.

**೫. ರಾಮರಾಜ್ಯ** ಒಂದೂಕಾಲು ರೂಪಾಯಿ.

ರಾಜರತ್ನಂ ಅವರು ಅನೇಕ ಸಭೆಗಳಲ್ಲಿ ಅನೇಕ ವಿಷಯಗಳನ್ನು ಕುರಿತು ಮಾತನಾಡಿದ್ದಾರೆ. ಮಾತನಾಡುವ ಮುಂಚೆ ವಿಷಯವನ್ನು ಚೆನ್ನಾಗಿ ವಿಚಾರದಿಂದ ಸಿದ್ಧಪಡಿಸಿಕೊಂಡದ್ದನ್ನು, ತಾವೇ ಸಂಗ್ರಹವಾಗಿ ಸೂತ್ರ ಬರೆದ ಹಾಗೆ ವರದಿ ಮಾಡಿದ್ದಾರೆ. ಅವರ ಭಾಷಣಗಳ ಸಾರವನ್ನು ಒಳಗೊಂಡ ಇಂತಹ ಹದಿನಾಲ್ಕು ಉಪನ್ಯಾಸ ಸಂಗ್ರಹಗಳನ್ನು ಇಲ್ಲಿ ಒಂದು ಕಡೆ ಪಡೆಯಬಹುದು.

**೬. ಪಂಚರಾತ್ರ ಪ್ರಪಂಚ** ಒಂದೂಕಾಲು ರೂಪಾಯಿ.

ವ್ಯಾಸರ ಭಾರತ ಒಂದು ತೂಕ, ಭಾಸನ ಭಾರತ ಒಂದು ತೂಕ. ಭಾಸನು ಕಟ್ಟಿದ ಭಾರತಕಥೆಯಲ್ಲಿ ಆತನ 'ಪಂಚರಾತ್ರ'ದ ಸೊಗಸು ಸರ್ವಥಾ ಅಪೂರ್ವ. ಪಾಂಡವರಿಗೂ ಕೌರವರಿಗೂ ಯುದ್ಧವಾಗದೆ, ಅವರು ಅನ್ಯೋನ್ಯವಾಗಿ ಅರ್ಧರಾಜ್ಯ ಹಂಚಿಕೊಂಡು ಸುಖವಾಗಿ ಬಾಳಿದರೆಂಬುದು ಇಲ್ಲಿನ ಕಥೆ. ಈ ಕಥೆಯ ಕಟ್ಟಡವನ್ನೂ ನಡಿಗೆಯನ್ನೂ ಓಟವನ್ನೂ ಕುಣಿತವನ್ನೂ ಈ ಪುಟ್ಟ ಪುಸ್ತಕ ಮನದಟ್ಟಾಗುವಂತೆ ವಿವರಿಸಿ ಕೊಡುತ್ತದೆ.

**೭. ಏಕಲವ್ಯಪಂಕ್ತಿ** ಒಂದೂಕಾಲು ರೂಪಾಯಿ.

ವ್ಯಾಸರ ಏಕಲವ್ಯ ಕೈಲಾಸಂ, ಶ್ರೀ, ಗೋವಿಂದ ಪೈ, ಕುವೆಂಪು ಇವರುಗಳ ಕೈಯಲ್ಲಿ ಹೇಗೆ ಬೆಳೆದಿದ್ದಾನೆ ಎಂಬುದನ್ನು ಇಲ್ಲಿ ಕಾಣಬಹುದು.

# ರಾಜರತ್ನಂ ಪುಸ್ತಕಗಳು—ನಮ್ಮಲ್ಲಿ ದೊರಕುವವು.

೧. **ಗಂಡುಗೊಡಲಿ** ಆರಾಣೆ.

ಪರಶುರಾಮನ ವೀರವನ್ನು ಚಿತ್ರಿಸುವ ಬಿಸಿರಕ್ತದ ನಾಟಕ.

೨. **ಕೆಂಬ್ಲೀಸೇವೆ ಮತ್ತು ನರಕದ ನ್ಯಾಯ** ಹತ್ತಾಣೆ.

ಎರಡು ಪುಟ್ಟ ನಾಟಕ. ನಗುವಿನ ಹನಿಗಳ ಹಳ್ಳ.

೩. **ಶ್ರೀ ಕವಿರತ್ನ** ಒಂದೂವರೆ ರೂಪಾಯಿ.

ಕವಿಚಕ್ರವರ್ತಿ ರನ್ನನ ಕೃತಿರತ್ನಗಳಿಗೆ ಸುಲಭದ ಕೈಪಿಡಿ.

೪. **ಚಿಕದೇವರಾಜಬಿನ್ನಪ** ಒಂದೂವರೆ ರೂಪಾಯಿ.

ವಿಶಿಷ್ಟಾದ್ವೈತವನ್ನು ಮಕ್ಕಳಿಗೆ ಹೇಳಿದಂತೆ ಹೇಳಿರುವ ಗ್ರಂಥ.

೫. **ವಿಗಡ ವಿಕ್ರಮಚರಿತ** ಹದಿನಾಲ್ಕಾಣೆ.

ಮೈಸೂರಿನ ದಳವಾಯಿಯೊಬ್ಬನ ಉಗ್ರವಾದ ಕಥೆ.

೬. **ಹೊಸಗನ್ನಡ ಯಶೋಧರ ಚರಿತೆ** ಒಂದು ರೂಪಾಯಿ.

ಕವಿಚಕ್ರವರ್ತಿ ಜನ್ನನ ಹಳಗನ್ನಡ ಕಾವ್ಯದ ಅನುವಾದ. ಅಹಿಂಸೆಯ ಮಹಿಮೆಯನ್ನು ಚಿತ್ರಿಸುವ ಅಮೃತಕಥೆ.

೭. **ಚಿತ್ರಾಂಗದಾ ಚಿತ್ರಕೂಟ** ಒಂದೂಕಾಲು ರೂಪಾಯಿ.

ಚಿತ್ರಾಂಗದೆಯ ನಾಲ್ಕು ಚಿತ್ರಗಳ ವಿಮರ್ಶೆ.

೮. **ಬುದ್ಧನ ವರ್ಣವಾದ** ಎರಡು ರೂಪಾಯಿ.

ಜಾತೀಯತೆಯ ಜಾಡ್ಯಕ್ಕೆ ಇಲ್ಲಿ ದಿವ್ಯವಾದ ಔಷಧ ಇದೆ.

**ಆನಂದ್ ಬ್ರದರ್ಸ್, ಪ್ರಕಾಶಕರು, ಬೆಂಗಳೂರು-೨.**